# ಕೊಡಗು ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾವಣಿ

ಕನ್ನಡ ಮತ್ತು ಅರೆಭಾಷೆಯ ಏಕೈಕ ಪಾಕ್ಷಿಕ ಪತ್ರಿಕೆ

K.R.N.N. 240 ಸಂಪುಟ : 3 ಸಂಚಿಕೆ : 2 ಜನವರಿ 15 ರಿಂದ 31, 1999 ಪುಟಗಳು : 24 ರೂ. 5



[ಲೇಖನ ಒಳಪುಟದಲ್ಲಿ]

ಅರೆಭಾಷಿಕರ ಹಿರಿಮೆಯನ್ನು ಉತ್ತುಂಗಕ್ಕೇರಿಸಿದ ಕೀರ್ತಿಶಾಲಿ,
ಶಿಸ್ತಿನ ಸಿಪಾಯಿ ಕ್ಯಾಪ್ಟನ್ ದೇವಜನ ತಿಮ್ಮಯ್ಯ ರಾಜ

28233

## ಕೃತಜ್ಞತೆಗಳು

ದಿನಾಂಕ **16-11-1998** ರಂದು ದೈವಾಧೀನರಾದ ಶ್ರೀಮತಿ ಕೊಂಪುಳಿರ ಗಂಗಮ್ಮನವರ ನಿಧನದ ಸಂದರ್ಭದಲ್ಲಿ ಭೇಟಿ ನೀಡಿ ನಮ್ಮ ದುಃಖದಲ್ಲಿ ಪಾಲ್ಗೊಂಡು ಸಾಂತ್ವನ ನೀಡಿದ ಹಾಗೂ ಅಂತ್ಯಕ್ರಿಯೆ ಕಾರ್ಯದಲ್ಲಿ ಸಹಕರಿಸಿದ ಮತ್ತು ದೂರವಾಣಿ ಮೂಲಕ ತಮ್ಮ ಸಂತಾಪ ವ್ಯಕ್ತಪಡಿಸಿದ ನಮ್ಮ ಎಲ್ಲಾ ಬಂಧು-ಮಿತ್ರರಿಗೂ, ಹಿತೈಷಿಗಳಿಗೂ ಈ ಮೂಲಕ ಕೃತಜ್ಞತೆಯನ್ನು ಅರ್ಪಿಸುತ್ತೇವೆ. ಅಲ್ಲದೆ ಮೃತರ ಆತ್ಮಕ್ಕೆ ಭಗವಂತನು ಚಿರಶಾಂತಿಯನ್ನು ಕರುಣಿಸಲಿ ಎಂದು ಸಹ ಪ್ರಾರ್ಥಿಸುವ.

ದುಃಖತಪ್ತ ಪತಿ : **ಆನಂದ**

ಮಗ : **ಬೋಪಯ್ಯ, ಸೊಸೆ : ಕುಸುಮ**

ಮೊಮ್ಮಕ್ಕಳು : **ಡ್ಯಾನಿ, ಡೈನಾ**

ಮಗಳಂದಿರು : **ಉಮಾದೇವಿ, ಗೌರಮ್ಮ, ರಮಾದೇವಿ**

ಅಳಿಯಂದಿರು : **ಚೆದುಕಾರ್ ಅಪ್ಪಾಜಿ, ತೆಕ್ಕಡೆ ಕಾವೇರಪ್ಪ, ತಿರೋಡಿ ಪ್ರಕಾಶ್ ಮತ್ತು ಮಕ್ಕಳು ಹಾಗೂ ಮೊಮ್ಮಕ್ಕಳು**

---



### ಕೊಡಗು ಸಂಗಾತಿ ಚಂದದಾರರಲ್ಲಿ ವಿನಂತಿ

ಸಂಗಾತಿ ಪತ್ರಿಕೆಯು ಹೊರಬಂದು 3ನೇ ವರ್ಷಕ್ಕೆ ಪಾದಾರ್ಪಣೆ ಆಗಿರುವುದು ಸಂತಸಕರ. ಚಂದದಾರರಿಗೆ ತಪ್ಪದೆ ಪತ್ರಿಕೆಯನ್ನು ಕಳುಹಿಸಿದರೂ ಸಹ ಹಲವು ಸದಸ್ಯರಿಂದ ಚಂದ ಹಣ ಇನ್ನೂ ಬಂದಿರುವುದಿಲ್ಲ. ಪ್ರತಿ ಭಾರಿಯೂ ಜ್ಞಾಪನ ಪತ್ರವನ್ನಿಟ್ಟರು ಸಹ ಈ ತನಕ ನವೀಕರಿಸದೆ ಇರುವವರು ಕೂಡಲೇ ನವೀಕರಿಸಿಕೊಳ್ಳುವಂತೆ ಪ್ರಾರ್ಥನೆ. ಪತ್ರಿಕೆ ನಷ್ಟದ ಹಾದಿಯಲ್ಲಿರುವುದನ್ನು ಮಹಾಜನತೆ ಗಂಭೀರವಾಗಿ ಪರಿಗಣಿಸತಕ್ಕದ್ದು.

ಎಂ.ಓ/ಡಿಡಿ/ನಗದು ರೂಪದಲ್ಲಿ ವ್ಯವಹಾರವಿರಲಿ.

—ಸಂಪಾದಕ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**
ಗೌರವ ಸಂಪಾದಕ :
**ಪಟ್ಟಡ ಎಂ. ಪ್ರಭಾಕರ**
ಮುದ್ರಕರು :
**ಮಣ್ಣಂಡ್ರ ಕೆ. ತಮ್ಮಯ್ಯ**

ಚಂದಾ ಕಳುಹಿಸುವ ಮತ್ತು
ಜಾಹೀರಾತು ಪ್ರಸಾರ ಕಛೇರಿ :
**ಕೊಡಗು ಸಂಗಾತಿ**
ನಂ. 35, "**ಸವಿತಾ ನಿಲಯ**"
1ನೇ ಕ್ರಾಸ್, 4ನೇ ಬ್ಲಾಕ್,
ಡಿವಿಜನಲ್ ಟೆಲಿಕಾಂ ಕಛೇರಿ ಹತ್ತಿರ,
ಜಯಲಕ್ಷ್ಮಿಪುರಂ, ಮೈಸೂರು-12.
ಫೋನ್ : 0821/516771

**-ಸಂಪರ್ಕಿಸುವ ವಿಳಾಸ-**

**ಮಣಿ ನಂಗಾರ್**
C/o ನಂಗಾರ್ ಆಡಿಯೋ & ವೀಡಿಯೋ
ಕೊಳ್ಳ ಕಾಂಪ್ಲೆಕ್ಸ್, ಮಂಗಳೂರು ರಸ್ತೆ,
ಚಿಕ್ಕಪೇಟೆ, ಮಡಿಕೇರಿ-571 201
ದೂರವಾಣಿ : 08272/29372

**ಬೈತಡ್ಕ ಜಾನಕಿ ಬೆಳ್ಯಪ್ಪ**
ನಂ. 16, ಎಲ್.ಐ.ಸಿ. ಹತ್ತಿರ
ರೇಸ್ ಕೋರ್ಸ್ ರಸ್ತೆ, ಮಡಿಕೇರಿ
ದೂರವಾಣಿ : 08272/28047

**ಕುಂಭಗೌಡನ ಸೋಮಣ್ಣ**
ಮಯೂರ ಕೋಲ್ಡ್ ಸ್ಟೋರೇಜ್
ಮುಖ್ಯ ರಸ್ತೆ, ಕುಶಾಲನಗರ-571237

**ಅಮ್ಮಾಜೀರ ಪೊನ್ನಪ್ಪ ಅಥವಾ**
**ಕಲ್ಲುಮುಟ್ಲು ಬಸಪ್ಪ**
20, 1ನೇ ಮೈನ್, 4ನೇ ಕ್ರಾಸ್
ಸಾಕಮ್ಮ ಗಾರ್ಡನ್, ಬಸವನಗುಡಿ,
ಬೆಂಗಳೂರು-04
ದೂರವಾಣಿ-080/642822

## ಒಳನೋಟ



### ಅರೆ ಭಾಷಿಕ ವಿಭಾಗ



### ಚಂದಾ ವಿವರ

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

# ಸಂಪಾದಕೀಯ :

## ಸಂಘ ಸಂಸ್ಥೆಗಳು

ಪ್ರತಿಯೊಂದು ಸಂಘ ಸಂಸ್ಥೆಗಳು ಪ್ರಜಾಸತ್ತಾತ್ಮಕತ್ವದ ಮೇಲೆ ಕಾರ್ಯನಿರ್ವಹಿಸುತ್ತವೆ. ಇದು ಸಹಕಾರಿ ಸಂಘಗಳು ಆಗಿರಬಹುದು ಅಥವಾ ಯಾವುದೇ ಸಮಾಜವಾಗಿರಬಹುದು ಅಥವಾ ಧಾರ್ಮಿಕ ಸಂಸ್ಥೆಯಾಗಿರಬಹುದು. ಇವೆಲ್ಲದಕ್ಕೂ ಒಂದು ಧ್ಯೇಯ ಧೋರಣೆಗಳಿರುತ್ತದೆ. ಅದರ ಕಾರ್ಯಕರ್ತರು ಆ ಉದ್ದೇಶ ಧ್ಯೇಯಗಳನ್ನು ಸಾಧಿಸುವುದಕ್ಕೆ ತನ್ನ ತನವನ್ನು ಮರೆದು ನಮ್ಮ ತನದಿಂದ ಕೆಲಸ ಮಾಡಿದರೆ ಮಾತ್ರ ತನ್ನ ಧ್ಯೇಯವನ್ನು ಸಾಧಿಸಲು ಸಾಧ್ಯ. ಅದರ ಬದಲು ಯಾವುದೇ ಸಂಘ ಸಂಸ್ಥೆಗಳಲ್ಲಿ ಸ್ವಾರ್ಥತೆ, ವ್ಯಕ್ತಿಗತವಾದ ಅಭಿರುಚಿಯಿಂದ ಕೆಲಸ ಮಾಡಿದರೆ ಸ್ವಜನ ಪಕ್ಷಪಾತವಿದ್ದರೆ, ಸಾರ್ವಜನಿಕ ಹಿತಾ ಶಕ್ತಿಗಳನ್ನು ನಿರ್ಲಕ್ಷಿಸಿದರೆ ಅಂತಹ ಸಂಘ ಸಂಸ್ಥೆಗಳು ಎಂದೆಂದಿಗೂ ತನ್ನ ಧ್ಯೇಯವನ್ನು ಸಾಧಿಸಲಾರವು.

ಅದೇ ರೀತಿಯಲ್ಲಿ ವ್ಯಕ್ತಿಗಳು ತಮ್ಮ ಪ್ರತಿಷ್ಠೆಗಾಗಿ ಒಂದು ಸಂಘದ ಯಾ ಸಮಾಜದ ಅಧ್ಯಕ್ಷ ಅಥವಾ ಕಾರ್ಯದರ್ಶಿ ಆಗುವುದರಿಂದ ಆ ಸಂಸ್ಥೆಯ ಧ್ಯೆರ್ಯವನ್ನು ಸಾಧಿಸಲು ಸಾಧ್ಯವಾಗದು. ಕಾರ್ಯಕಾರಿ ಮಂಡಳಿಯವರು ಸಂಸ್ಥೆಯ ಧ್ಯೇಯವನ್ನು ಸಾಧಿಸಲು ತಮ್ಮ ತಮ್ಮ ಸೂಕ್ತ ಸಲಹೆಗಳನ್ನು ಮಂಡಿಸಿ ಕಾರ್ಯಕಾರಿ ಸಭೆಯಲ್ಲಿ ಲವಲವಿಕೆಯಿಂದ ಕೂಡಿರುವಂತೆ ಮಾಡಬೇಕು. ಅದರ ಬದಲು ಸಭೆಗೆ ಹಾಜರಾಗಿ ತನ್ನ ಹಾಜರಾತಿಯ ರುಜು ಮಾಡಿಸುವುದಕ್ಕಾಗಿ ಅಥವಾ ಭತ್ಯ ಗಿಟ್ಟಿಸುವುದಕ್ಕಾಗಿ ಸಭೆಗೆ ಹಾಜರಾದರೆ ಅಂತಹ ಸದಸ್ಯರು ಸಂಸ್ಥೆಗೆ ಯಾವ ರೀತಿಯ ಸೇವೆಯನ್ನು ಮಾಡಲಾರರು.

ಸಂಘ ಸಂಸ್ಥೆಗಳಲ್ಲಿ ದುಡಿಯುವವರಿಗೆ ತ್ಯಾಗ ಬುದ್ಧಿ ಇಲ್ಲದಿದ್ದರೆ ಪ್ರಯೋಜನ ಆಗಲಾರದು. ತ್ಯಾಗ ಅಂದರೆ ಹಣವನ್ನು ಅಥವಾ ಸಂಪತ್ತನ್ನು ತ್ಯಾಗ ಮಾಡುವುದೆಂದರ್ಥವಲ್ಲ. ಯಾರು ಸಂಘ ಸಂಸ್ಥೆಗಳಲ್ಲಿ ದುಡಿಯುತ್ತಾನೋ ಆ ವ್ಯಕ್ತಿಗೆ ಸ್ವಾರ್ಥ ಭಾವ ಇಲ್ಲದೆ ಸಂಘ ಸಂಸ್ಥೆಯೇ ತನ್ನ ಗುರಿ ಎಂದು ಶ್ರದ್ಧೆಯಿಂದ ಅವಿರತ ದುಡಿದರೆ ಅದೇ ತ್ಯಾಗ ಅದೇ ನಿಜವಾದ ಸಮಾಜಸೇವೆ. ಅದಲ್ಲದೆ ಕಾಟಾಚಾರಕ್ಕೆ ಒಬ್ಬ ಅಧ್ಯಕ್ಷ, ಕಾರ್ಯದರ್ಶಿ, ಕಾರ್ಯಕಾರಿ ಮಂಡಳಿಯ ಸದಸ್ಯರು ತಿಂಗಳಿಗೋ, ಎರಡು ತಿಂಗಳಿಗೋ ಸೇರಿ ತೀರ ಗೂಢಿಯಾಗಿ ಮಾತಾಡಿ ತಿಂದು ಕುಡಿದು ತನ್ನ ಧ್ಯೇಯ, ಧೋರಣೆಗಳ ಗೊಡವೆಯೇ ಇಲ್ಲದೆ ನಡೆಯುತ್ತಾ ಹೋದರೆ ನೂರು ವರ್ಷಗಳಾದರೂ ಆ ಸಂಘದ ಕಾರ್ಯ ಸಾಧನೆಯಾಗಲಾರದು. ಇನ್ನು ಕೆಲವು ಸಂಘ, ಸಂಸ್ಥೆಗಳಲ್ಲಿ ಆರಂಭದಲ್ಲಿ ಶೂರರಾಗಿ ಅನಂತರ ಆ ಸಂಸ್ಥೆಯ ಉದ್ದೇಶವನ್ನು ಮರತೇ ಬಿಡುವವರಿದ್ದಾರೆ.

ಈ ರೀತಿಯಾದರೆ ಸ್ವಾರ್ಥ ತ್ಯಾಗ ವಿಶಾಲವಾದ ಭಾವನೆ, ಶಿಷ್ಟಚಾರದ ನಡಾವಳಿಕೆ ವರ್ಷವಿಡೀ ಭೋರ್ಗರೆದು ಹರಿಯುವ ಕಾವೇರಿಯಂತೆ ತನ್ನ ಧ್ಯೇಯ ಧೋರಣೆಗಳ ಕಾರ್ಯಗತಕ್ಕೆ ನಿರಂತರವಾದ ಶ್ರದ್ಧೆ ಕಾರ್ಯಕ್ರಮಗಳಿಂದ ಖಂಡಿತವಾಗಿ ಸಾಧ್ಯವಿದೆ ಎಂಬುದಾಗಿ ಸಂಗಾತಿಯ ಅಚಲ ನಂಬಿಕೆಯಾಗಿದೆ.

---

## ಪ್ರಾರ್ಥನೆ

ದೇವಿ ಶಾರದೆ ಲೋಕ ವಂದಿತೆ
ನಿಂಗೆ ನನ್ನ ವಂದನೆ
ದೇವಿ ನಿನ್ನ ಹಗಲ್ ಇರ್‌ಳ್
ಗ್ಯಾನ ಮಾಡ್‌ತ್ತಿದ್ದನೆ ॥

ಬ್ರಹ್ಮನರಾಣಿ ವೀಣಾಪಾಣಿ
ನಿಂಗೆ ನನ್ನ ವಂದನೆ
ತಾಯಿ ನೀನ್ ದಿನಾ ನನ್ನ
ಪಾಲಿಸ್‌ಂತ ಬೇಡಿನೆ ॥

ತುಂಗಾ ತೀರದ ಶೃಂಗೇರಿ ಕ್ಷೇತ್ರದ
ನಿಂಗೆ ನನ್ನ ವಂದನೆ
ದೇವಿ ನಾನ್ ಭಕ್ತಿಭಾವಲಿ
ನಿಂಗೆ ಅಡ್ಡ ಬಿದ್ದನೆ ॥

ಆದಿ ಶಂಕರಾರ್ಚಿತೆ ಆದಿ ಶಕ್ತಿರೂಪಿಯೇ
ನಿಂಗೆ ನನ್ನ ವಂದನೆ
ಕರುಣಿಸನ್ಮ ಜ್ಞಾನ ಜ್ಯೋತಿ
ಹೇ ವಿದ್ಯಾದಾಯಿನಿ ॥

ಸರ್ವಾಂಬೆ, ಸಬ್ಬಮ್ಮ ನಾಮಾಂಕಿತೆ
ನಿಂಗೆ ನನ್ನ ವಂದನೆ
ಮೊದುವೆಲಿ ನಾವ್ ಹರಿಕೆ ಕಟ್ಟಿನೆ
ದೇವಿ ಶುಭದಾಯಿನಿ ॥

—ಕುಲ್ಲಚನ ಕಾರ್ಯಪ್ಪ,
ಕುಂಬಳದಾಳು.

# ಅರೆಭಾಷಿಕರ ಹಿರಿಮೆಯನ್ನು ಉತ್ತುಂಗಕ್ಕೇರಿಸಿದ ಕೀರ್ತಿಶಾಲಿ, ಧೈರ್ಯಶಾಲಿ, ಸಮಾಜ ಸೇವಕ, ನಿಷ್ಠಾವಂತ ಶಿಸ್ತಿನ ಸಿಪಾಯಿ : ಕ್ಯಾಪ್ಟನ್ ದೇವಜನ ತಿಮ್ಮಯ್ಯ ರಾಜ [ರಾಜು]

ಕ್ಯಾಪ್ಟನ್ ದೇವಜನ ತಿಮ್ಮಯ್ಯ ರಾಜ[ರಾಜು] ಇವರನ್ನು ಅರಿಯದವರು ವಿರಳವೆನ್ನಬೇಕು. ಬೆಂಗಳೂರಿನಲ್ಲಿ ಯಾವ ಲಗ್ನ ಕಾರ್ಯವಾಗಲಿ, ವೀಳ್ಯಶಾಸ್ತ್ರವೇ ಆಗಲಿ ಅದಕ್ಕೆ ಮುಂದಾಳತ್ವ ವಹಿಸಿ ಸಾವು, ಸುದ್ದ, ತಿಥಿ, ಹೆಣ್ಣು ಗಂಡು ಮಾಡುವುದು, ಜಗಳ ರಾಜಿ ಪಂಚಾಯಿತ್ತಿ, ಹೀಗೆ ಗೌಡ ಸಂಸ್ಕೃತಿಗೆ ಮಾಡುವ ಸೇವೆ ಅಪೂರ್ವವಾದದ್ದು. 32 ವರ್ಷ ತಾಯ್ನಾಡನ್ನು ಬಿಟ್ಟು ಹೊರಗಿದ್ದರೂ ಕೂಡ ನಮ್ಮ ಭಾಷೆ, ಸಂಸ್ಕೃತಿ, ಆಚಾರ, ವಿಚಾರ ಸಂಪ್ರದಾಯಗಳನ್ನು ಮರೆಯದೇ ಚಾಚು ತಪ್ಪದೆ ಪಾಲಿಸುತ್ತಾರೆ. "ಕಲ್ತ ಭಾಷೆನ ಮರೆಕಾಗದ್, ಊಟ ಮಾಡ್ದ ಬಟ್ಲ್‌ನ ಮರೆಯಕ್ಕಾಗದ್, ನಮ್ಮ ಸಂಸ್ಕೃತಿನ ನಾವ್ ಬಿಡಿಕ್ಕಾಗದ್" ಎಂಬ ಮೂಲ ಮಂತ್ರ ಇವರದಾಗಿದೆ. ಗೌಡರ ಸಮಾರಂಭವಾಗಲಿ ಇನ್ನಿತರ ಯಾರದೇ ಸಮಾರಂಭವಾಗಲಿ ಈ ರಾಜ ಮಾವ ಒಬ್ಬ ಇದ್ದರೆ ಸಾಕ್ ಎಲ್ಲರನ್ನು ನಕ್ಕು ನಗಿಸಿ ಮನಸೂರೆಗೊಳ್ಳುವ ವ್ಯಕ್ತಿತ್ವ ಇವರದು. ದಕ್ಷಿಣದ ಧ್ರುವ ಅಂಚಿಗೆ ಹೋಗಿಬಂದ ಏಕೈಕ ಅರೆಭಾಷಿಕ ಗೌಡ. ಈಗ ಸೈನಿಕ ಜೀವನದಿಂದ ನಿವೃತ್ತಿಯಾಗಿ 43 ಬಾರಿ ದಿಬ್ಬಣದ ಮುಖ್ಯಸ್ತನಾಗಿ, 18ಬಾರಿ ವೀಳ್ಯ ಶಾಸ್ತ್ರಗಳನ್ನು ಮಾಡಿದ ಕೀರ್ತಿ ಇವರದು. ನಿಗದಿತ ಸಮಯಕ್ಕೆ ಸರಿಯಾದ ಧಾರೆ, ಹೆಣ್ಣು ಇಳಿಸುವುದು, ಮಂತ್ರೋಪದೇಶ ಮಾಡುವುದರಿಂದ ದಂಪತಿಗಳು ಸಹಬಾಳ್ವೆಯನ್ನು ನಿರಂತರವಾಗಿ ಸಾಗಿಸುತ್ತಾರೆ ಅನ್ನುವ ನಿಲುವು ಇವರದು. ಕಷ್ಟ ಕಾರ್ಪಣ್ಯವನ್ನು ಅರಿತು, ಸೈನಿಕನಾಗಿ ದೇಶಸೇವೆಗೈದು ಈಗ ಸಮಾಜ ಸೇವೆಯಲ್ಲಿ ನಿರತರಾಗಿರುವ ಶ್ರೀಯುತರ ಅಮೋಘ ಪರಿಚಯವನ್ನು ಸಮಸ್ತ ಕುಲಬಾಂಧವರಿಗೆ ಪರಿಚಯಿಸಲು ಸಂಗಾತಿಗೆ ಹೆಮ್ಮೆಯೆನಿಸುತ್ತಿದೆ.

—ಸಂಪಾದಕಿ

ಕ್ಯಾಪ್ಟನ್ ರಾಜರವರು ಕೊಡಗು ಜಿಲ್ಲೆ, ಮಡಿಕೇರಿ ತಾಲೂಕಿನ ಪಾರಣೆಯ ಕಿರುಂದಾಡು ಗ್ರಾಮದ ದೇವಜನ ತಿಮ್ಮಯ್ಯ ಮತ್ತು ಪೊನ್ನಮ್ಮ ದಂಪತಿಗಳ ದ್ವಿತೀಯ ಪುತ್ರನಾಗಿ 18-12-1946ರಲ್ಲಿ ಜನಿಸಿದರು. ದೊಡ್ಡ ಕುಟುಂಬ ಸಣ್ಣ ಆದಾಯವಾದರೂ ವಿದ್ಯಾಭ್ಯಾಸವನ್ನು ಮಾಗೇರ್ಲ್ಲಿ, ಸಿದ್ದಾಪುರ ಮತ್ತು ನಾಪೋಕ್ಲು ಹೈಸ್ಕೂಲಿನಲ್ಲಿ ಓದಿ ಬಡತನದ ಬೇಗೆಯಿಂದ ಮುಂದೆ ಓದಲಾರದೆ ಶಾಲೆ ಬಿಡುವಂತಾಯಿತು

1962ರ ಚೈನಾ ಯುದ್ಧ, ದೇಶದ ಬಡತನ, ಮಳೆ ಇಲ್ಲದ ಕಾಲ, ತಿತಿಮತಿಯಲ್ಲಿ ಹೊಸ ಆಸ್ತಿ, ಬಿದಿರು ಅಕ್ಕಿ ತಿಂದು ಜೀವಿಸುತ್ತಿದ್ದ ಇವರನ್ನು ಕಂಡ ಶ್ರೀಮಂತ ಗೌಡ ಜನರು ನಮ್ಮಲ್ಲಿಗೆ ದನ ಕಾಯಲು ಬಾ, 3 ಹೊತ್ತು ಅನ್ನ ಕೊಟ್ಟನೆ, ವಾರಕ್ಕೆ 5 ರೂಪಾಯಿ ಕೊಟ್ಟನೆ ಎಂದು ಕರೆಯುತ್ತಿದ್ದ ಕಾಲವದು. ಓದಲು ಸ್ವಲ್ಪ ಹಣ ಸಹಾಯ ಮಾಡಿ, ನನ್ನನ್ನು ಓದಿಸಿ ಎಂದು ಕಾಲಿಗೆ ಬಿದ್ದರೂ ಸಹ ಪ್ರಯೋಜನವಾಗಲಿಲ್ಲ ಅಪ್ಪ ಆಸ್ಪತ್ರೆಯಲ್ಲಿ. 4 ಮಕ್ಕಳ ಅವ್ವ ಏನು ತಾನೆ ಮಾಡಿಯಾರು? 1962ರ ಒಂದು ದಿನ ಅವ್ವ ಕೆಂಬಡೆ ಕಾಯಿ ಬೇಯಿಸಿ, ಉಪ್ಪು ಹಾಕಿ, ಬಿದಿರು ಅಕ್ಕಿ ಅನ್ನ ಮಾಡಿ ಬುತ್ತಿ ಕಟ್ಟಿ ಅವರ ಕೈಲಿದ್ದ 5.35 ನಯಾಪೈಸೆಯನ್ನು ಕೈಗೆ ಹಿಡಿಸಿ "ನೀನ್ ಎಲ್ಲಿಗಾದ್ರು ಚಾಕ್ರಿಗೆ ಹೋಗು ಮಗ, ಅಪ್ಪನ ಅವ್ವನ ಹೆಸರ್‌ನ ಕೊಂಡಾಡ್" ಎಂದು ಒಂದು ವೊಲ್ಲಿ [ಬೆಡ್‌ಶೀಟ್] ಯೊಂದಿಗೆ ಬೀಳ್ಕೊಟ್ಟರು. ಆಗ ತನ್ನಲ್ಲಿದ್ದ ಒಂದೂವರೆ ರೂ. ಬಸ್ಸಿಗೆ ಕೊಟ್ಟು ಅಪ್ಪನ ಹತ್ತಿರ ವೀರಾಜಪೇಟೆ ಆಸ್ಪತ್ರೆಗೆ ಹೋಗಿ ಆಶೀರ್ವಾದ ಪಡೆದು 2 ರೂಪಾಯಿಯನ್ನು ಅಪ್ಪನಿಗೆ ಕೊಟ್ಟು ವೀರಾಜಪೇಟೆಯಿಂದ ಸೀದಾ ಮಡಿಕೇರಿಗೆ ನಡೆದುಕೊಂಡೆ ಬಂದು ಅಲ್ಲಿ 1962 ರಲ್ಲಿ ಕೆ. ಎಸ್. ಆರ್. ಪಿ.ಯ ವೈರ್‌ಲೆಸ್ ವಿಭಾಗಕ್ಕೆ ಆಯ್ಕೆ ಆದರು.

ನಂತರ 1963ರಲ್ಲಿ ಭಾರತೀಯ ಭೂದಳದ ಇಲೆಕ್ಟ್ರಿಕಲ್ ಮೆಕಾನಿಕಲ್ ಇಂಜಿನಿಯರ್‌ಗೆ ಭರ್ತಿ ಆದರು. 2 ವರ್ಷದ ನಂತರ ಆಗ್ರಾದಲ್ಲಿದ್ದ ಇಂಡಿಯನ್ ಪ್ಯಾರ ಟ್ರೂಪ್‌ಗೆ ಆಯ್ಕೆ ಆಗಿ ಸುಮಾರು 188 ಪ್ಯಾರ ಜಂಪ್ ಮಾಡಿದ್ದಾರೆ. 2000, 4000 ಅಡಿ ಎತ್ತರವಲ್ಲದೆ 5000-25000 ಅಡಿಗಿಂತಲೂ ಹೆಚ್ಚಿನ ಎತ್ತರದ, ಜೀವಕ್ಕೆ ಅಪಾಯಕರವಾದ ಜಿಗಿತವನ್ನು ಸಾಕಷ್ಟು ಮಾಡಿದ್ದಾರೆ. 1965ರಲ್ಲಿ ಇಂಡೋಪಾಕ್ ಯುದ್ಧದ ಸಮಯದಲ್ಲಿ ಕಮಾಂಡೊಯೊಂದಿಗೆ ಭಿಕ್ಷುಕನಾಗಿ ಪಾಕಿಸ್ತಾನಕ್ಕೆ ಹೋಗಿ 4 ಯುದ್ಧ ಟ್ಯಾಂಕ್‌ಗಳನ್ನು ಸೆರೆಹಿಡಿಯುವಲ್ಲಿ ಇವರು ಸಹ ಒಬ್ಬರಾಗಿದ್ದರು. "ಕರೋ ನಹಿತೋ ಮರೋ" [Do or die ಮಾಡು ಇಲ್ಲವೇ ಮಡಿ] ಎಂಬ ಉವಾಚ ಇವರದು. 1971 ರಲ್ಲಿ ಬಾಂಗ್ಲಾ ದೇಶ ಯುದ್ಧದಲ್ಲಿ ಇವರು ಮತ್ತು ಜೊತೆಗಾರ ಮಲ್ಕಿತ್‌ಸಿಂಗ್ ಪ್ರಥಮ

ಪ್ಯಾರಟ್ರೂಪರ್ಸ್ ಆಪರೇಶನ್ಸ್‌ಗೆ ಆಯ್ಕೆ ಆಗಿ ಪ್ಯಾರಚೂಟ್ ಬೆಟಾಲಿಯನ್‌ನೊಂದಿಗೆ ಇವರಿದ್ದರು. ಯುದ್ಧ ವಿಮಾನದಲ್ಲಿ ಡಾಕಾದ ಮೇಲೆ ಹಾರಿ ಜನರಲ್ ನೀಯ್ಯಾಜಿಯನ್ನು ಹಾಗೂ ಪ್ರಬಲ ಪಾಕಿಸ್ಥಾನದ ಸೈನಿಕರನ್ನು ಸೆರೆ ಹಿಡಿಯುವಲ್ಲಿ ಸಫಲರಾದರು. ಬಾಂಗ್ಲಾ ದೇಶದ ನಿವಾಸಿಗಳು ಇಂಡಿಯನ್ ಈಗಲ್ಸ್ ಆಚೀರೇ ಬಾಬಾ ಎಂದು ಕುಶಿಯಿಂದ ನಲಿದಾಡುತ್ತಿದ್ದ ದೃಶ್ಯವನ್ನು ಇವರ ಭಾವ ಚಿತ್ರದೊಂದಿಗೆ ಡಿಸಂಬರ್ 1971ರ ಇಲ್ಯೂಸ್ಟ್ರೇಟೆಡ್ ವೀಕ್ಲಿ ಪತ್ರಿಕೆಯ ಮುಖ ಪುಟದಲ್ಲಿ ಪ್ರಕಟಿಸಿದ್ದರು.

1979ರಲ್ಲಿ ಮೂರ್ನಾಡುವಿನ ಬೈಲೋಳಿ ಗಣಪತಿಯವರ ಸುಪುತ್ರಿ ಧನಲಕ್ಷ್ಮಿಯವರನ್ನು ವಿವಾಹವಾದರು. 1989ರಲ್ಲಿ ಶ್ರೀಲಂಕದ ಯುದ್ಧದಲ್ಲಿ ಪ್ಯಾರ ಅಡ್ವಾನ್ಸ್ ವರ್ಕ್‌ಶಾಪ್ ಕಮಾಂಡರ್ ಆಗಿ ಭಾಗವಹಿಸಿ ಉತ್ತಮ ಸೇವೆಗೈದು ಕೀರ್ತಿಯನ್ನು ತಂದರು. 1991ರಲ್ಲಿ ಇಂಡಿಯನ್ ಸೈಯಿಂಟಿಪಿಕ್ ಎಕ್ಸ್‌ಪೇಡಿಶಸ್ ಟೂ ಅಂಟಾರ್ಕಿಟಿಕಾ [ದಕ್ಷಿಣ ದ್ರುವ]ಕ್ಕೆ ಕಾಪ್ರ್ಸ್ ಆಫ್ ಸಿಗ್ನಲ್‌ನಿಂದ ದಕ್ಷಿದ ಭಾರತದ ಪ್ರಥಮ ಪ್ರಜೆಯಾಗಿ ಆಯ್ಕೆಗೊಂಡರು ಇವರಿಗೆ ಅಂಟಾರ್ಕಿಟಿಕಾದಲ್ಲಿ ಎಲ್ಲಾ ಮಿಶಿನ್ಸ್‌ನಗಳ ಜನರೇಟರ್ಸ್, ಸ್ನೋಕಿಟ್ಸ್‌ಗಳ ಉಸ್ತುವಾರಿ ಕೊಟ್ಟಿದ್ದರು. 3-12-1991ಕ್ಕೆ ಗೋವದಿಂದ ಹೊರಟು 30-12-1991ಕ್ಕೆ ದಕ್ಷಿಣ ಧ್ರುವವನ್ನು ತಲಪಿದರು. ಅಲ್ಲಿ ಜರ್ಮನಿ, ರಷ್ಯಾ ಹಾಗೂ ಇಂಡಿಯಾದ ವಿಜ್ಞಾನಿಗಳೊಂದಿಗೆ 16 ತಿಂಗಳು 4 ಡಿಗ್ರಿ c ಯಿಂದ 7 ಡಿಗ್ರಿ c ಡಿಗ್ರಿ ಚಳಿ ಪ್ರದೇಶದಲ್ಲಿ 6 ತಿಂಗಳು ಹಗಲು 6 ತಿಂಗಳು ರಾತ್ರಿ ಇರುವ ಜಾಗದಲ್ಲಿ ಇದ್ದು ಬದುಕಿ ಬಂದಂತಹವರು. ಅಲ್ಲಿಯ ಹಂಬೋಟು ಪ್ರದೇಶದಲ್ಲಿ ಭಾರತದ 4 ಜನ ವಿಜ್ಞಾನಿಗಳು ಜೀವ ತೆತ್ತಾಗ ಮತ್ತು ಇಬ್ಬರು ವಿಜ್ಞಾನಿಗಳು ಹಿಮದೊಳಗೆ ಹೂತುಕೊಂಡಾಗ ಅವರನ್ನು "ಸ್ನೋ ಕಟ್" ಯಂತ್ರದಿಂದ ಪತ್ತೆ ಹಚ್ಚುವಲ್ಲಿ ಯಶಸ್ವಿಯಾದವರಿವರು. ಈ ಪ್ರದೇಶವು ಸುರಕ್ಷಿತ ಮೈತ್ರಿ ತಾಣದಿಂದ ಸುಮಾರು 150 ಕಿ.ಮೀ. ದೂರದಲ್ಲಿತ್ತು. ಇವರು ಕರ್ನಲ್ ಜೆ.ಕೆ. ಬಜಾಜ್ ನೇತೃತ್ವದ ದಕ್ಷಿಣ ಧ್ರುವ ಕೇಂದ್ರ ಬಿಂದುವಿಗೆ ತಲುಪಲು ಇಡೀ ಪ್ರಪಂಚದ ವಿಜ್ಞಾನಿಗಳ ತಂಡದ ಸಾಹಸದಲ್ಲಿ ಇವರೊಬ್ಬರಾಗಿದ್ದುದು ನಮ್ಮ ಜನಾಂಗಕ್ಕೆ ಹೆಮ್ಮೆಯೆನಿಸಿದೆ.

1993ರಲ್ಲಿ ಕ್ಯಾಪ್ಟನ್‌ಗೆ ಬಡ್ತಿ ಹೊಂದಿ ಟೆಕ್ನಿಕಲ್ ಅಡ್‌ವೈಸರ್ ಆಗಿ ಬೆಂಗಳೂರಿನ ಐ ಟಿ ಐ, ಬಿ ಇ ಎಂ ಎಲ್ ಕಿರ್ಲೋಸ್ಕರ್ ಮುಂತಾದ ಪ್ಯಾಕ್ಟರಿಗಳಿಗೆ ಮಿಲಿಟರಿಯಿಂದಲೇ ಡೆಪ್ಯೂಟೇಶನ್ನಿನಲ್ಲಿ ವರ್ಗವಾಗಿ ಬಂದರು. ನಂತರ 1995ರ ನವಂಬರ್‌ನಲ್ಲಿ ತಮ್ಮ ಮಿಲಿಟರಿ ಸೇವೆಯಿಂದ ನಿವೃತ್ತಿಗೊಂಡರು. ಭೂಪಾಲ್‌ನಲ್ಲಿ ರಿಕ್ರೂಟ್‌ಮೆಂಟ್ ಕಾರ್ಯದಲ್ಲಿದ್ದಾಗ ಸುಮಾರು 27 ಗೌಡ ಬಡ ಮಕ್ಕಳಿಗೆ ದಾರಿದೀಪವಾಗಿದ್ದಾರೆ. ಇವರ ಮಿಲಿಟರಿಯ 32 ವರ್ಷದ ಮಹಾಸೇವೆಗೆ ಸುಮಾರು ಹತ್ತು ಯುದ್ಧದ ಪದಕಗಳು, ಮೇಲ್ಮಟ್ಟದ ಸೇನಾ ಪದಕವು ಆರ್ಮಿ ಮುಖ್ಯಸ್ಥರಿಂದ ಹಲವಾರು ಪ್ರಶಸ್ತಿ ಪತ್ರಗಳು ಅಲ್ಲದೆ ಇನ್ನಿತರ ಹಲವು ಗುಡ್ ಕಾಂಡಕ್ಟ್ ಪತ್ರಗಳು ಇವಲ್ಲದೆ ಸೇನಾ ಮೆಡಲ್‌ಗಳನ್ನು ಪಡೆದ ಧೀಮಂತ.

ಬೆಂಗಳೂರಿನ ಕೊಡಗು ಮತ್ತು ದ. ಕ. ಜಿಲ್ಲಾ ಗೌಡ ಸಮಾಜದ ಅಧ್ಯಕ್ಷತೆ ವಹಿಸಿದ ಶ್ರೀ ಕುರುಂಜಿ ವೆಂಕಟರಮಣ ಗೌಡರಿಂದ ಸನ್ಮಾನಿಸಲ್ಪಟ್ಟರು. ಹಾಗೆಯೇ ಕೊಡಗು ಗೌಡ ಸಮಾಜದ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಶ್ರೀ ಎಲ್.ಟಿ. ಕಾರ್ಲೆ ಇವರಿಂದಲೂ ಶಾಲು ಹೊದಿಸಿ ಸನ್ಮಾನಿಸಲ್ಪಟ್ಟಿದ್ದಾರೆ. ಬೆಂಗಳೂರಿನ ಐ.ಟಿ.ಐ. / ಎಚ್.ಎ.ಎಲ್. ಸಮಾಜ ಬಾಂಧವರು ಸಹ ಸನ್ಮಾನಿಸಿದ್ದಾರೆ. ಮಡಿಕೇರಿಯ **ಕೊಡವ ಸಮಾಜದವರು** ಕೂಡ ಸನ್ಮಾನಿಸಿದ್ದು ಶ್ರೀಯುತರ ಸಾಹಸ, ಸಮಾಜ ಸೇವೆಗೆ ಸಂದ ನಿಷ್ಕಳಂಕ ಗೌರವ ಕಿರೀಟ ಪ್ರಾಯವಾಗಿದೆ.

ಬಡ ಮಕ್ಕಳ ಬಗ್ಗೆ ಅತೀ ಕಾಳಜಿಯಿರುವ ಇವರು ಜನಾಂಗದ ಅಭಿವೃದ್ಧಿಗೆ ನಿಜವಾಗಲೂ ಮುಂಚೂಣಿಯಲ್ಲಿರುವ ವ್ಯಕ್ತಿಯಾಗಿದ್ದಾರೆ. ಜನಾಂಗದ ಬಡ ವರ್ಗಕ್ಕೆ ಸಹಕರಿಸಿ ಅವರನ್ನು ಮುಂದೆ ತರಬೇಕು ಅನ್ನುವ ಇವರ ವಾದಕ್ಕೆ ಪ್ರೋತ್ಸಾಹ ಸಿಕ್ಕಿದ್ದೆ ಆದರೆ ಜನಾಂಗ ಅಭಿವೃದ್ಧಿಯಾಗುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲವೆನ್ನಬಹುದು. ಶ್ರೀಯುತರು ಹಿಂದಿನ ಹಳೆ ಕಾಲದ ಹೊಟ್ಟೆಕಿಚ್ಚು/ದ್ವೇಷ/ಮತ್ಸರ ಇತ್ಯಾದಿ ದುರ್ಗುಣ ಬಿಟ್ಟು ತಮ್ಮ ಮಕ್ಕಳೆಂದು ತಿಳಿದು ಸಹಾಯ ಮಾಡುವುದು ಒಳಿತೆನ್ನುತ್ತಾರೆ.

ಪತ್ನಿ ಧನಲಕ್ಷ್ಮಿ ಮತ್ತು 3 ಮಕ್ಕಳಾದ ತಿಮ್ಮಯ್ಯ, ನಿರೂಪ, ಸ್ವರೂಪ ಇವರೊಂದಿಗೆ ಬೆಂಗಳೂರಿನ ಯಲಹಂಕದಲ್ಲಿ ಸ್ವಂತ ಮನೆ ಮಾಡಿ ತನ್ನದೆ ವಿಶಿಷ್ಟ ರೀತಿಯಲ್ಲಿ ಸಮಾಜಸೇವೆ ಮಾಡುತ್ತಿರುವ ಸಾಹಸಿಗ ಮತ್ತು ವಿಶಾಲ ಹೃದಯವಂತಿಗ ರಾಜ ರವರಿಗೆ ನಮ್ಮ ಕುಲಗುರು ವೆಂಕಟರಮಣ ಸ್ವಾಮಿಯು ಸಕಲಐಶ್ವರ್ಯ ಆರೋಗ್ಯಭಾಗ್ಯ ಕರುಣಿಸಲಿ ಎಂದು ಕೊಡಗು ಸಂಗಾತಿ ಸಮಸ್ತ ಅರೆಭಾಷಿಕರ ಪರವಾಗಿ ಶುಭವನ್ನು ಹಾರೈಸುತ್ತದೆ. ○

ಸಂದರ್ಶನ ವರದಿ : **ಕಲ್ಲುಮುಟ್ಲು ಬಸಪ್ಪ**

ಲೇಖನ : **ಪಟ್ಟಡ ಪ್ರಭಾಕರ**

# ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ವಾರ್ಷಿಕ ಮಹಾ ಸಭೆ : ಹೊಸ ಆಡಳಿತ ಮಂಡಳಿಯ ರಚನೆ

ವರದಿ : **ಪಟ್ಟಡ ಶಿವಕುಮಾರ್**

ಶತ ಶತಮಾನಗಳಿಂದ ನಿದ್ದೆಯ ಮಂಪರಿನಲ್ಲಿದ್ದ ಗೌಡ ಜನಾಂಗವನ್ನು ಎಚ್ಚೆಬ್ಬಿಸಿ, ಅವರಲ್ಲಿ ಆತ್ಮವಿಶ್ವಾಸವನ್ನು ತುಂಬಿಸಿ, ಮುಖ್ಯವಾಹಿನಿಯಲ್ಲಿ ಸೇರಲು ಹುರಿದುಂಬಿಸಿದ, ಕೊಡಗಿನಲ್ಲಿ ಗೌಡ ಜನಾಂಗದ ಅಸ್ತಿತ್ವವನ್ನು ಎತ್ತಿಹಿಡಿದು, ಅವರ ಇರಾದೆಯನ್ನು ಸ್ಪಷ್ಟಪಡಿಸಿ ತಾನು ಜನ್ಮತಳೆದ ಅತ್ಯಲ್ಪಾವಧಿಯಲ್ಲೇ ಗೌಡಜನಾಂಗದ ಹೃನ್ಮನ ಸೆಳೆದ, ಗೌಡ ಜನಾಂಗದ ಸಂಘಟನೆಗಳಲ್ಲೇ ಅತ್ಯಂತ ಕಾರ್ಯಶೀಲವಾದ "ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ವಾರ್ಷಿಕ ಮಹಾ ಸಭೆ ಡಿಸೆಂಬರ್ 25 ರಂದು ಮಡಿಕೇರಿಯ ಗೌಡ ಸಮಾಜದಲ್ಲಿ ಜರುಗಿತು.

ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡಿದ ಅಕಾಡೆಮಿಯ ಅಧ್ಯಕ್ಷ ತುಂತಜ್ಜೆ ಗಣೇಶರವರು ಅಕಾಡೆಮಿ ಜನ್ಮತಳೆಯಲು ಕಾರಣಗಳನ್ನು ವಿಶ್ಲೇಷಿಸಿದರು. ಒಂದು ವರ್ಷಗಳ ಹಿಂದೆ ಕೊಡಗು ಉತ್ಸವ ನಡೆದಾಗ ಅಲ್ಲಿ ಗೌಡ ಜನಾಂಗದ ಪ್ರತಿನಿಧಿತ್ವವೇ ಇಲ್ಲದೆ, ಅವಮಾನವನ್ನು ಎದುರಿಸಬೇಕಾಯಿತು. ಹಿರಿಯರು ಈ ಬಗ್ಗೆ ಸಭೆ ಸೇರಿ ನಾವೇಕೆ ಹಿಂದುಳಿದಿದ್ದೇವೆ ಎಂದು ಆತ್ಮವಿಮರ್ಶೆ ಮಾಡಿಕೊಂಡಾಗ, ಸಾಂಸ್ಕೃತಿಕ ಅಕಾಡೆಮಿ ಸ್ಥಾಪನೆಯ ಆಕಾಂಕ್ಷೆ ಮೊಳಕೆಯೊಡೆಯಿತು. ಅಕಾಡೆಮಿ ಜನ್ಮತಳೆದಾಗ ನಮ್ಮವರೇ 'ಏನು ಸಂಸ್ಕೃತಿ ? ಏನು ಅಕಾಡೆಮಿ ? 'ಎಂಬ ಉಡಾಫೆಯ ಪ್ರಶ್ನೆಗಳನ್ನು ಕೇಳಿದರು. ಆದರೆ ಇಂದು ಪತ್ರಿಕೆಗಳಲ್ಲಿ, ರೇಡಿಯೋದಲ್ಲಿ, ದೂರದರ್ಶನದಲ್ಲಿ, ದಸರಾದಲ್ಲಿ, ಕರ್ನಾಟಕ ಸಾಂಸ್ಕೃತಿಕ ಮೇಳಗಳಲ್ಲಿ, ಸಭೆ ಸಮಾರಂಭಗಳಲ್ಲಿ ಗೌಡಸಂಸ್ಕೃತಿ ಪ್ರತಿಬಿಂಬಿಸುತ್ತಿದೆ. ಇದಕ್ಕೆಲ್ಲ ಈ ಅಕಾಡೆಮಿಯೇ ಕಾರಣ ಎಂದರು. ಇನ್ನು ಮುಂದೆ ಇದಕ್ಕಿಂತಲೂ ಯಶಸ್ವಿಯಾಗಿ ಕಾರ್ಯ ನಿರ್ವಹಿಸಲು ಸಹಕಾರ, ಪ್ರೋತ್ಸಾಹ ನೀಡುವಂತೆ ಸದಸ್ಯರಲ್ಲಿ ಹಾಗೂ ಜನತೆಯಲ್ಲಿ ಅವರು ಮನವಿ ಮಾಡಿಕೊಂಡರು.

ಸಭೆಗೆ ಚುನಾವಣಾಧಿಕಾರಿಯಾಗಿ ಆಗಮಿಸಿದ್ದ ಗೌಡ ವಿದ್ಯಾಸಂಘದ ಅಧ್ಯಕ್ಷರಾಗಿರುವ ಕುಯ್ಯುಮುಡಿ ಪೂರ್ಣಯ್ಯನವರು ಮಾತನಾಡಿ, ಅಕಾಡೆಮಿಯ ಕಾರ್ಯಚಟುವಟಿಕೆಯನ್ನು ಶ್ಲಾಘಿಸಿದರು. ಈಗಿನ ಆಡಳಿತ ಸಮಿತಿ ಉತ್ತಮವಾಗಿ ಕಾರ್ಯ ನಿರ್ವಹಿಸಿ ಯಶಸ್ಸನ್ನು ತಂದಿರುವುದರಿಂದ ಎಲ್ಲಾ ಆಡಳಿತ ಮಂಡಳಿಯ ಸದಸ್ಯರ ಅವಿರೋಧವಾಗಿ ಆಯ್ಕೆಯಾಗಲಿ ಎಂದು ಸಲಹೆ ಮಾಡಿದರು. ಅದರಂತೆ ಮಡಿಕೇರಿ ನಗರವನ್ನು ಹೊರತುಪಡಿಸಿ ಉಳಿದಂತೆ ಎಲ್ಲಾ ಸದಸ್ಯರು ಅವಿರೋಧವಾಗಿ ಆಯ್ಕೆಯಾದರು. ಮಡಿಕೇರಿ ನಗರಕ್ಕೆ ಚುನಾವಣೆ ನಡೆದು, ಕೋಡಿ ಚಂದ್ರಶೇಖರ್, ಗುಡ್ಡೆಮನೆ ರಮೇಶ್, ನಂಗಾರು ಮುತ್ತಪ್ಪ, ಕುಂಜಿಲನ ಪೂಣಚ್ಚರವರು ಬಹುಮತ ಪಡೆದು ಚುನಾಯಿತರಾದರು. ಇದೇ ಕ್ಷೇತ್ರದ ಮಹಿಳಾ ಮೀಸಲು ಸ್ಥಾನಕ್ಕೆ ಮಣ್ಣಂಡ್ರ ರೇಖಾಉಲ್ಲಾಸ್ ಅವಿರೋಧವಾಗಿ ಆಯ್ಕೆಯಾದರೆ ಉಳಿದಂತೆ ಗಾಳಿಬೀಡು ಕರಕರನ ಉತ್ತಯ್ಯ, ಬೆಟ್ಟಗೇರಿ ಶ್ರೀಮತಿ ನೆಯ್ಯಣಿ ಹೇಮಲತಾ, ಮದೆನಾಡು ಹುದೇರಿ ನಾಗೇಶ್, ಚೇರಂಬಾಣೆ ನಡುವಟ್ಟೀರ ಅನಂತ, ಚೆಟ್ಟಿಮಾನಿ ಪೊನ್ನೇಟಿ ಶಾಂತಿ, ಭಾಗಮಂಡಲ ಕುದುಕುಳಿ ಭರತ್, ಕರಿಕೆ ಕುದುಪಜೆ ಚಿಣ್ಣಪ್ಪ, ನಾಪೋಕ್ಲು ಕೊಂಬನ ಗಣೇಶ್, ಚೆಯ್ಯಂಡಾಣೆ ತೋಟಂಬೈಲು ಪ್ರೇಮಾ ಆನಂದ್, ಹಾಕತ್ತೂರು ತುಂತಜೆ ಗಣೇಶ್, ಮೂರ್ನಾಡು ಕೊಂಪುಳೀರ ಗಣೇಶ್, ಮರಗೋಡು ಪೊಳಕಂಡ್ರ ಮುತ್ತಪ್ಪ, ವಿರಾಜಪೇಟೆ ಬೆಳ್ಯೂರು ವೆಂಕಪ್ಪ, ಸಿದ್ದಾಪುರ ಕುಕ್ಕುನೂರು ಸೋಮಣ್ಣ, ಸೋಮವಾರಪೇಟೆ ತಾಲೋಕಿಗೆ ಶ್ರೀಮತಿ ಕಾನೆಹಿತ್ಲು ಹರಿಣಾಕ್ಷಿ ನಂಗಾರು ಎಸ್ ಜಗ್ಗ ಕುದುಕುಳಿ ಸುಬ್ಬಯ್ಯ, ಅಂಚೆಮನೆ ಸುಧಿ, ಅ ಸು. ಬೋಪಣ್ಣ ಇವರೆಲ್ಲರೂ ಅವಿರೋಧವಾಗಿ ಆಡಳಿತ ಮಂಡಳಿಯ ಸದಸ್ಯರಾಗಿ ಆಯ್ಕೆಯಾದರು. ಸಂಪಾಜೆಯ ಗುಂಡಿಮಜಲು ಗಣಪಯ್ಯ, ಮೂಲೆಮಜಲು ಸದಾನಂದ, ಭಾಗಮಂಡಲದ ಮೊಟ್ಟನ ಅಮುಲ್ ದೇವಯ್ಯ, ಹೊದ್ದೂರಿನ ಕುಲ್ಲಚನ ದಿನೇಶ್, ಪತ್ರಿಕಾ ಪ್ರತಿನಿಧಿಯಾಗಿ ಪಟ್ಟಡ ಪ್ರಭಾಕರ್ ಇವರುಗಳು ಖಾಯಂ ಆಹ್ವಾನಿತರಾಗಿ ಆಯ್ಕೆಯಾದರು.

ಮಣ್ಣಂಡ್ರ ರೇಖಾಉಲ್ಲಾಸರವರ ಪ್ರಾರ್ಥನೆಯೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಜನಾಂಗದಲ್ಲಿ ದುಡಿದು ಮಡಿದ ಗಣ್ಯರಿಗೆ ಸಂತಾಪ ಸೂಚಿಸಲಾಯಿತು. ಇತ್ತೀಚೆಗೆ ತಾಲ್ಲೂಕು ಪಂಚಾಯತ್ ಉಪಾಧ್ಯಕ್ಷೆಯಾಗಿ ಆಯ್ಕೆಯಾದ ತೋಟಂಬೈಲು ಪ್ರೇಮಾ ಆನಂದ್‌ರವರನ್ನು ಸದಸ್ಯರು ಚಪ್ಪಾಳೆ ತಟ್ಟುವ ಮೂಲಕ ಅಭಿನಂದಿಸಿದರು. ಅಕಾಡೆಮಿಯ ಕಾರ್ಯದರ್ಶಿ ಕೋಡಿ ಚಂದ್ರಶೇಖರ್‌ರವರು ವರದಿ ವಾಚಿಸಿ ನಂತರ ಕೊನೆಯಲ್ಲಿ ಸಭಿಕರಿಗೆ ವಂದನಾರ್ಪಣೆ ಸಲ್ಲಿಸಿದರು.

## ಜಾತದೊಳಗೊಂದು ಮೇಳ : ನಾವು ಕನ್ನಡಿಗರು

ಧಾಟಿ—ಲಾವಣಿ

ದಿಲ್ಲಿಯ ರಾಜ ಬೀದಿಯಲಂದು ನಡೆದಿತ್ತು ಜೋರಾಗಿ ಜಾತವೊಂದು
ಜೊತೆಯಲಿ ಬಂದಿತ್ತು ಪ್ರತ್ಯೇಕ ರಾಜ್ಯದ ಬೇಡಿಕೆ ಹೊತ್ತ ಫಲಕವೊಂದು
ಮುಂದೆ ಮುಂದೆಯೇ ಸಾಗಿತ್ತು ಹಾಡುತ್ತಾ ಕುಣಿಯುವ ತಂಡವೊಂದು
ದಿಲ್ಲಿಯ ರಾಷ್ಟ್ರಪತಿ ಭವನದ ಮುಂದೆ ಸೋತು ಕುಕ್ಕರ ಬಡಿದಿತ್ತಂದು ॥

ಮುಸಿ ಮುಸಿ ನಕ್ಕ ಕೊಡಗಿನ ತಲೆಯ ಪೇಟವು ಇಂತು ನುಡಿದಿತ್ತು
ನನಗೇಕೆ ಬೇಕು ಪ್ರತ್ಯೇಕ ರಾಜ್ಯ ನಾನು ಮೈಸೂರ ಅಚ್ಚ ಕನ್ನಡಿಗ
ಸುಮ್ಮನಿರಲಾರದೆ ನೀರೆಯರ ತಲೆಯ ಚೌಕವು ತ್ವರೆ ಮಾಡಿ ನುಡಿದಿತ್ತು
ನನಗೇಕೆ ಬೇಕು ಪ್ರತ್ಯೇಕ ರಾಜ್ಯ ನಾನು ಮಲೆನಾಡ ಸಿಂಗಾರ ಕನ್ನಡತಿ ॥

ಕುಪ್ಪಸದ ಮೇಲೆ ಸುತ್ತಿದ ಜರತಾರಿ ದಟ್ಟಿ ನುಡಿಯಿತು ನಾನು ಕನ್ನಡಿಗ
ಬೊಟ್ಟು ಬೊಟ್ಟಿನ ಪಟ್ಟೆ ಸೀರೆ ನುಡಿಯಿತು ನಾನು ಅಚ್ಚ ಕನ್ನಡತಿ
ನಮಗೇಕೆ ಬೇಕು ಪ್ರತ್ಯೇಕ ರಾಜ್ಯ ನಾವು ಮೈಸೂರ ರೇಸಿಮೆ ವಸ್ತ್ರ
ನಮ್ಮನ್ನು ನೆಯ್ದುದ್ದು ಕನ್ನಡದ ದೇವಾಂಗ ನೇಕಾರ ಬಳಗ ॥

ಮುತ್ತಿನ ಸರವೊಂದು ತಟ್ಟನೆ ನುಡಿಯಿತು ನಾನು ಕನ್ನಡದ ಅಕ್ಷರ ಮಾಲೆ
ಕನ್ನಡಾಂಬೆಯ ಮುತ್ತಿನ ಹಾರ ಉತ್ತರದ ಕಾರವಾರವೇ ನನ್ನ ತವರೂರು
ಕಡಲ ತೀರದ ಹವಳವೂ ಜೊತೆಗೂಡಿ ಹೇಳಿತು ನಾವು ಕನ್ನಡಿಗರು
ನಮಗೇಕೆ ಬೇಕು ಪ್ರತ್ಯೇಕ ರಾಜ್ಯ ನಾವು ಕನ್ನಡದ ಕಣ್ಮಣಿಗಳು ॥

ಕರಿಮಣಿ ಸುತ್ತಿನ ಚಿನ್ನದ ಎಳೆಯು ನುಡಿಯಿತು ನಾನು ಕನ್ನಡತಿ
ಕೋಲಾರ ಗಣಿಯ ಹೊನ್ನಿನ ಪದಕ ನಾನು ನನಗೇಕೆ ಬೇಕು ಪ್ರತ್ಯೇಕ ರಾಜ್ಯ
ಮೈಸೂರು ಮಲ್ಲಿಗೆ ದಂಡೆಯು ನುಡಿಯಿತು ಮೆಲ್ಲನೆ ಪಿಸು ಪಿಸು ಮಾತಿನಲಿ
ನನಗೂ ಬೇಡ ಪ್ರತ್ಯೇಕ ರಾಜ್ಯ ನಾನು ಕನ್ನಡದ ಸುಮಂಗಲಿ ॥

ದೊರೆಗಳು ನೀಡಿದ ಕತ್ತಿಯು ನುಡಿಯಿತು ನಾನು ಕನ್ನಡದ ಸಿಪಾಯಿ
ದೂರದ ಊರಲಿ ದಂಡಿನಲ್ಲಿರುವ ಮಕ್ಕಳ ಕ್ಷೇಮ ವಿಚಾರಿಸಲು
ಬೇಕೇ ಬೇಕು ಕನ್ನಡ ಅಕ್ಷರ ಕನ್ನಡ ಪದ ಪುಂಜಗಳು
ಮತ್ತ್ಯಾಕೆ ಬೇಕು ಪ್ರತ್ಯೇಕ ರಾಜ್ಯ ನಾವು ಕನ್ನಡಮ್ಮನ ಸೇವಕರು ॥

ಕತ್ತಲೆ ಕಳೆಯಲು ವಿದ್ಯುತ್ ದೀಪ ಬೇಕು ನಮ್ಮ ಹಳ್ಳಿಗಳಿಗೆ
ವಾಹನ ಸಂಚಾರ ಮತ್ತಷ್ಟು ಬೇಕು ರೈಲು ವಿಮಾನ ನಿಲ್ದಾಣದೊಂದಿಗೆ
ಡಾಂಬರು ರಸ್ತೆಯು ಮತ್ತೆ ಸೇತುವೆ ಬೇಕೇ ಬೇಕು ಎಲ್ಲಾ ಕಡೆ
ಬೇಕಿರಲು ಮತ್ತಷ್ಟು ಬೇಡಿಕೆ ಒಗ್ಗಟ್ಟಿನೊಂದಿಗೆ ಪ್ರತ್ಯೇಕತೆಯ ಹಂಗೇಕೆ ॥

[ಮುಂದಿನ ಪುಟ ನೋಡಿ]

## ನಗೆಹನಿಗಳು

ಗುರುಗಳು : "ನಿಮ್ಮ ಊರಲ್ಲಿ ಯಾರಾದರೂ ದೊಡ್ಡ ಮನುಷ್ಯರು ಹುಟ್ಟಿದ್ದಾರಾ. ಅವರ ಬಗ್ಗೆ ನಿಮಗೇನು ಗೊತ್ತು ?"

ವಿದ್ಯಾರ್ಥಿ : 'ನನಗೆ ತಿಳಿದ ಮಟ್ಟಿಗೆ ನಮ್ಮೂರಲ್ಲಿ ಎಲ್ಲ ಚಿಕ್ಕಮಕ್ಕಳೇ ಹುಟ್ಟೋದು !"

❁ ❁ ❁

ಕಾಂಟೆಸ್ಸಾ ಕಾರಿನಿಂದಿಳಿದ ಸೂಟುದಾರಿಯೊಬ್ಬ ಶ್ರೀಮದ್ ಗಾಂಭೀರ್ಯ ಪ್ರದರ್ಶಿಸುತ್ತ, ಬ್ಯಾಂಕಿನೊಳಗೆ ಬಂದ. ಮ್ಯಾನೇಜರ್ ಕೊಠಡಿಯೊಳಗೆ ಹೋಗಿ ಕುಳಿತ. ಅಕೌಂಟೆಂಟ್ ಬಂದು "ಮ್ಯಾನೇಜರ್ ಇಲ್ಲ, ಏನು ಬೇಕು ಹೇಳಿ ಮಾಡಿ ಕೊಡ್ತೀನಿ" ಎಂದು ಕೇಳಿದ.

ಅವನತ್ತ ತಿರಸ್ಕಾರದ ದೃಷ್ಟಿಯಿಂದ ನೋಡಿದ ಸೂಟುಧಾರಿ "ಮ್ಯಾನೇಜರ್ ಬರಲಿ, ನನಗೆ ಸಣ್ಣ ಪುಟ್ಟ ಮಾನುಷ್ಯರೊಂದಿಗೆ ವ್ಯವಹರಿಸಿ ಅಭ್ಯಾಸವಿಲ್ಲ" ಎಂದು ರೇಗಿದ.

ಅಕೌಂಟೆಂಟ್ ಮೌನವಾಗಿ ಹೊರಟು ಹೊದ.

ಸುಮಾರು ಒಂದು ಗಂಟೆಯ ಮೇಲಾದರೂ ಮ್ಯಾನೇಜರ್ ಪತ್ತೆ ಇಲ್ಲ. ಬೇಸತ್ತ ಸೂಟುಧಾರಿ ಅಕೌಂಟೆಂಟನನ್ನು ಕೂಗಿದ. ಆದರೆ ಅವನು ಬರಲಿಲ್ಲ. ಕಡೆಗೆ ಬೇರೆ ದಾರಿಕಾಣದೆ ಅವನೇ ಎದ್ದು ಅಕೌಂಟೆಂಟ್ ಬಳಿ ಹೋಗಿ "ಮ್ಯಾನೇಜರ್ ಬರಲಿಕ್ಕೆ ಇನ್ನು ಎಷ್ಟು ಸಮಯವಾಗಬಹುದು ? ಅಂತ ಕೇಳಿದ.

ಒಂದು ವಾರ ಅಷ್ಟೆ, ಬಂದು ಬಿಡ್ತಾರೆ ಅಕೌಂಟೆಂಟ್ ಹೇಳಿದ. "ಅವರು ರಜದ ಮೇಲಿದ್ದಾರೆ."

ಸೂಟುಧಾರಿ ಸುಸ್ತಾಗಿ ಬೆವರೊರಿಸಿ ಕೊಂಡ !

[ಹಿಂದಿನ ಪುಟದಿಂದ]

ಪ್ರತ್ಯೇಕ ರಾಜ್ಯ ಬೇಡವೇ ಬೇಡ ಕೊಡಗಿಗೆ ಅಭಿವೃದ್ಧಿ ಬೇಕೇ ಬೇಕು
ಇಗ್ಗುತಪ್ಪನಾಣೆ ಮತ್ತೆ ಕಾವೇರಿ ತಾಯಾಣೆ ನಮಗಿಲ್ಲ ಇಂಥ ದುರಾಶೆ
ನೋಡಲಾರೆವು ನಾವು ತಾಳಲಾರೆವು ಕೊಡಗಿನ ಅಂತಃಕಲಹಗಳ
ಎದ್ದೇಳಿ ಕೊಡಗಿನ ವೀರಶೂರರೆ ಕಂಕಣ ಕಟ್ಟಿ ಕನ್ನಡ ಕುವರಿಯ ಮಾನ
ಕಾಪಾಡಿ ॥

ಕಾವೇರಿಯಿಂದ ಮಹಾಗೋದಾವರಿವರೆಗೂ ಮೆರೆದ ಕನ್ನಡ ನಾಡನ್ನು
ನೀವು ತಳ್ಳದಿರಿ ವಿನಾಶದೆಡೆ ಸೋತು ಬೀಳದಿರಿ ಇನ್ನೊಮ್ಮೆ ದಾಸ್ಯಕ್ಕೆ
ಕಳಚದಿರಿ ಕನ್ನಡಮ್ಮನ ಕೈ ಕಾಲುಗಳ ಹೇಡಿತನದಲಿ ನೀವು
ಒಕ್ಕೊರಲಿನಿಂದೊರಗಿ ಒಗ್ಗಟ್ಟಿನಿಂದ ನಾವು ಕನ್ನಡಿಗರು ನಾವು
ಅಚ್ಚ ಕನ್ನಡಿಗರು ॥

—ಬಿಟ್ಟೀರ ಶಂಭು ಚೋಂದಮ್ಮ, ಬೆಂಗಳೂರು.

## ಗಾದೆಗಳು

- ಚೆಲ್ಲಿ ಹೋದ ಹಾಲಿಗೆ ಚಿಂತಿಸಿ ಫಲ ವೇನು ?
- ಜಾತಿ ಜಾತಿಗೆ ವೈರಿ, ನೀರಿಗೆ ಪಾಚಿ ವೈರಿ.
- ಅರೆಪಿರಾಂದನು ತಾ ಕಳ್ಳ, ಪರರ ನಂಬ.
- ತಾಯಿಯಂತೆ ಮಗಳು, ನೂಲಿನಂತೆ ಸೀರೆ.
- ದುಷ್ಟ, ದ್ವೇಷಾಸೂಯೆ ಪಡುವವ ರಿಂದ ದೂರ ಇರು.

—ನಂಗಾರ್ ಅಜಯ್, ಜಾಯ್, ಕಮಲ, ಉತ್ತಪ್ಪ, ಮಡಿಕೇರಿ.

## ಅಕ್ಕಿ ಕೊಟ್ಟು ಅಕ್ಕನ ಮನೆಗೆ

ಅಕ್ಕಿ ಕೊಟ್ಟು ಅಕ್ಕನ ಮನೆಗೆ ಹೋಗಬೇಕೆ ? ಎನ್ನುವುದು ಈಗ out dated ಗಾದೆ ಆಗಿದೆ. ಇದಕ್ಕೆ ಸಾಕ್ಷಿ ಎಂದರೆ paying guest ವ್ಯವಹಾರ 'ಅತಿಥಿ ದೇವೋ ಭವ' ಇದು ಕೂಡ ಈಗ ಚಾಲ್ತಿಯಲ್ಲಿಲ್ಲ. paying guest ಎಂದರೆ ತಾನು ಊಟ ಮಾಡುವುದಕ್ಕೆ ಮತ್ತೆ ಉಳಿದುಕೊಳ್ಳಲು ಹಣ ಕೊಡುವ ಅತಿಥಿ ಎಂದರ್ಥ. ಆಂಗ್ಲ ಭಾಷೆಯಲ್ಲಿ guest ಸ್ವಲ್ಪ ತಪ್ಪಿದರೆ [ಬರವಣಿಗೆ] ghost ಆಗುತ್ತದೆ, ಎಂದರೆ ಪಿಸಾಚಿ [ದೆವ್ವ] ಹಾಗೆ ಕನ್ನಡದಲ್ಲಿ ಅತಿಥಿ ಬರೆಯುವಾಗ ಅವಸರದಲ್ಲಿ 'ಅ' ಬಿಟ್ಟರೆ ಅಲ್ಲೂ ತಿಥಿ ಆಗುತ್ತದೆ. ತಿಥಿ ಮಾಡುವುದು ಸತ್ತವರ ಹೆಸರಿನಲ್ಲಾದುದರಿಂದ ತಿಥಿ ಮಾಡುವ ಹೊತ್ತಿಗೆ ಅವರು ಪಿಸಾಚಿ ಆಗಿರುತ್ತಾರಲ್ಲವೇ ? ಆದುದರಿಂದ ಖಂಡಿತವಾಗಿ ಹೇಳುವುದಾದರೆ ಅತಿಥಿ ಆದವ ಸಭ್ಯನಿರಬೇಕು ಹಾಗೇ ಆತಿಥ್ಯ ನೀಡುವವರು ಕೂಡ.

paying guest ವ್ಯವಹಾರ ಯಾವಾಗಿಂದ ಹೇಗೆ ಪ್ರಾರಂಭವಾಯಿತು ಎಂದು ಹೇಳಲು ಬರುವುದಿಲ್ಲ. paying guest ಗಳಲ್ಲಿ ಮುಖ್ಯವಾಗಿ ಮೂರು ವಿಧ. ಒಂದು ವಿದ್ಯಾರ್ಥಿಗಳು ವ್ಯಾಸಂಗದ ದೃಷ್ಟಿಯಿಂದ ಸಂಬಂಧಿಕರ ಅಥವಾ ಪರಿಚಯಸ್ಥರ ಮನೆಯಲ್ಲಿರುವುದು. ಎರಡನೆಯದು ಪರ ಊರಿನಲ್ಲಿ ಉದ್ಯೋಗ ಮಾಡಬೇಕಾಗಿ ಬಂದಾಗ paying guest ಆಗಿರುವುದು ಮತ್ತು ಮೂರನೆಯದಾಗಿ ತನ್ನವರೆನ್ನುವವರು ಯಾರೂ ಇಲ್ಲದಿರುವ ವ್ಯಕ್ತಿಯೊಬ್ಬ ತನ್ನ ಇಳಿವಯಸ್ಸಿನಲ್ಲಿ ತಾನು ಯಾವುದೇ ಸ್ಥಿರ/ಚರ ಆಸ್ತಿ ಅಥವಾ ಪಿಂಚಣಿ ಪಡೆಯುವವನಾಗಿದ್ದರೆ ತನ್ನ ಕೊನೆಯ ದಿನಗಳನ್ನು ಸ್ನೇಹಿತರ ಮನೆಯಲ್ಲಿ ಕಳೆಯುವುದು ಮತ್ತು ತನಗೆ ಆಶ್ರಯ ನೀಡಿದವರಿಗೆ ಹಣ ಅಥವಾ ತನ್ನ ಸ್ಥಿರ/ಚರ ಆಸ್ತಿಯನ್ನು ಒಪ್ಪಿಸುವುದು.

ಈಗ ಅತಿಥಿಗಳಿಂದ ಹಣ ವಸೂಲಿ ಮಾಡುವ ಬಗ್ಗೆ ವಿಚಾರ ಮಾಡುವ, ಉದ್ಯೋಗ ಮಾಡುವ ದೃಷ್ಟಿಯಿಂದ ಅತಿಥಿಯೊಬ್ಬ ತನ್ನ ಮನೆಯಲ್ಲಿದ್ದರೆ ಸಂಪಾದನೆ ಮಾಡುತ್ತಾನಲ್ಲಾ ಎಂದು ಮುಲಾಜಿಲ್ಲದೆ ಹಣ ವಸೂಲಿ ಮಾಡುವುದಕ್ಕೆ ಆಗುತ್ತದೆ. ಇನ್ನು ಅನಾಥ ವೃದ್ಧರು ಅತಿಥಿ ಆಗಿದ್ದಾಗಲೂ, ಇನ್ನು ಯಾರಿಗಿರುವುದು ಎಂದು ಅವರಿಂದ ಪ್ರತಿಫಲ ಪಡೆಯಬಹುದು.

ವ್ಯಾಸಂಗಕ್ಕೆಂದು ವಿದ್ಯಾರ್ಥಿಗಳನ್ನು ತಮ್ಮ ಮನೆಯಲ್ಲಿ ಇಟ್ಟುಕೊಂಡಾಗ ಅವರಿಂದ ಹಣ ಪಡೆಯಬೇಕೇ ? ಬೇಡವೆ ? ಎಂಬ ಗೊಂದಲ ಏರ್ಪಡುತ್ತದೆ. ಅತಿಥಿಗಳಿಗೆ ಮಾಡಿ ಬಡಿಸುವವಳು ಗೃಹಿಣಿ. ಆದುದರಿಂದ ಹಣ ವಸೂಲಿ ಮಾಡುವುದು ಗೃಹಿಣಿಗೆ ಸಂಬಂಧಿಸಿದ ವಿಚಾರ. ಇಲ್ಲಿ ಏಕ ಪಕ್ಷೀಯವಾದ ಒಂದು ಸೂತ್ರ ಪ್ರಭಾವಿತವಾಗಿರುತ್ತದೆ. ಅದೆಂದರೆ ಮನೆಯ ಒಡತಿಯ ಕಡೆಯವರು ಅತಿಥಿಗಳಾಗಿದ್ದರೆ ಹಣ ಪಡೆದುಕೊಳ್ಳಬಹುದು ಇಲ್ಲಾ ಬಿಡಬಹುದು. ಆದರೆ ಮನೆಯೊಡೆಯನ ಕಡೆಯವರಾದರೆ ಖಡ್ಡಾಯವಾಗಿ ಹಣ ವಸೂಲಿ ಆಗಲೇಬೇಕು. ಎಲ್ಲೊ ಒಂದೆರಡು ಅಪವಾದಗಳಿರಬಹುದು.

ಆತಿಥ್ಯ ನೀಡುವವರು ಕೆಲವು ಕಷ್ಟಗಳನ್ನು ತೆಗೆದು ಕೊಳ್ಳಬೇಕಾಗುತ್ತದೆ ಓದುವ ಮಕ್ಕಳಾದರೆ ರೇಡಿಯೋ, ಟಿ. ವಿ. ಜೋರಾಗಿ ಹಾಕುವಂತಿಲ್ಲ. ಬೇರೆ ಅತಿಥಿಗಳು ಮನೆಗೆ ಬಂದಾಗ ಓದಿಗೆ ತೊಂದರೆ ಆಗದಂತೆ ನೋಡಿಕೊಳ್ಳಬೇಕು. ಮನೆಯವರೆಲ್ಲಾ ಸಮಾರಂಭಕ್ಕೆ ಹೋಗಿ ಗಡದ್ದಾಗಿ ತಿಂದು ಬಂದಿದ್ದರೂ ಮನೆಯಲ್ಲಿರುವ paying guest ಗಾಗಿ ಅಡಿಗೆ ಮಾಡುವ ಕಷ್ಟ ತೆಗೆದುಕೊಳ್ಳಬೇಕು. ತಮಗೆ ಮನಸ್ಸು ಬಂದಾಗ ಮನೆ ಬಿಟ್ಟು ಹೋಗಲು ಸಾಧ್ಯವಾಗುವುದಿಲ್ಲ. ತಮ್ಮ ನಿತ್ಯದ ವೇಳಾಪಟ್ಟಿಯಲ್ಲಿ ಮುಖ್ಯವಾಗಿ ಊಟ ತಿಂಡಿಗೆ ಸಂಬಂಧಿಸಿದಂತೆ ಅತಿಥಿಯು ಕೆಲಸದ ಸಮಯ, ವಿದ್ಯಾರ್ಥಿಗಳಾಗಿದ್ದರೆ ಶಾಲೆಗೆ ಹೋಗಬೇಕಾದ ಸಮಯ, ಮನೆಪಾಠ ಇತ್ಯಾದಿಗಳಿಗೆ ಅನುಕೂಲವಾಗುವ ರೀತಿಯಲ್ಲಿ ಬದಲಾಯಿಸಿಕೊಳ್ಳಬೇಕಾಗುತ್ತದೆ.

ಅತಿಥಿಯಾದವ ಕೂಡ ಇಲ್ಲಿ ಸ್ವಲ್ಪ ಸಂಕಟವನ್ನು ಪಡೆಯಬೇಕಾಗುತ್ತದೆ. ಬೆಳಿಗ್ಗೆ ಬೇಗ ಎದ್ದರೆ ಮನೆಯವರಿಗೆ ತೊಂದರೆ ಆಗದ ರೀತಿಯಲ್ಲಿ ಮೆಲ್ಲನೆ ಬೆಕ್ಕು ನಡೆವ ರೀತಿಯಲ್ಲಿ ನಡೆದಾಡಬೇಕು. ಬಚ್ಚಲಿಗೆ ಹೋಗಿ ಬರುವಾಗ ಮೆಟ್ಟಿನ ಜೊತೆ ನೀರು ಬಾರದ ರೀತಿಯಲ್ಲಿ ಬಹಳ ಎಚ್ಚರವಹಿಸಬೇಕು. ಮನೆಯವರ ಅಭಿರುಚಿಗೆ ತಕ್ಕಂತೆ ಬಚ್ಚಲಿನಲ್ಲಿ ಬೇರೆ ಬೇರೆ ಸ್ನಾನದ ಸಾಬೂನುಗಳಿರುತ್ತವೆ. ಪ್ರಾರಂಭದಲ್ಲಿ ಅತಿಥಿಯಾದವನಿಗೆ ತನಗೇ ಮೀಸಲಿಟ್ಟ ಸಾಬೂನು ಯಾವುದು ಎಂದು ತಿಳಿಯದೆ ಯಾರದೊ ಸಾಬೂನಿನಲ್ಲಿ ಸ್ನಾನ ಮಾಡಿ ಪೇಚಿಗೆ ಸಿಕ್ಕಿಕೊಳ್ಳುತ್ತಾನೆ. ಊಟದ ವಿಚಾರದಲ್ಲಿ ಅತಿಥಿ ತನ್ನ ಹೊಟ್ಟೆಯನ್ನು ಸ್ವಲ್ಪ ಸಣ್ಣ ಮಾಡಿಕೊಳ್ಳಬೇಕಾಗುತ್ತದೆ. ಮನೆಯವರು ಧಾರಾಳವಾಗಿ ನೀಡುವವರಿದ್ದರೂ, ಸ್ವಲ್ಪ ಕಡಿಮೆ ತಿನ್ನುವ paying guest ಗೆ ಸ್ವಲ್ಪ ಹೆಚ್ಚು ಮರ್ಯಾದೆ. ನಾನು paying guest ಆಗಿ ಒಬ್ಬರ ಮನೆಗೆ ಸೇರಿದ ಪ್ರಥಮ ರಾತ್ರಿ ಊಟಕ್ಕೆ ಮನೆಯವರೆಲ್ಲಾ ಒಟ್ಟಿಗೆ ಕುಳಿತ್ತಿದ್ದರು. ನಾನು ಒಂದು ಸಲ ಅನ್ನ ಊಟ ಮಾಡಿ ಎರಡನೆ ಬಾರಿ ಅನ್ನ ಕೇಳಿದಾಗ ಎಲ್ಲರೂ ನನ್ನನ್ನೇ ನೋಡುತ್ತಿದ್ದರು. ಆಮೇಲೆ ತಿಳಿಯಿತು ಅಲ್ಲಿ ರಾತ್ರಿ ಯಾರೂ ಎರಡನೆ ಬಾರಿ ಅನ್ನ ಹಾಕಿಸಿಕೊಳ್ಳುವುದಿಲ್ಲವೆಂದು. ಇನ್ನು ಮನೆಯವರು ಕರೆದಾಗ ಮಾತ್ರ ಊಟಕ್ಕೆ ಹೋಗಬೇಕಲ್ಲದೆ ನನಗೆ ಇಂದು ಹಸಿವಾಗುತ್ತಿದೆ ಎಂದು ಅರ್ಧಗಂಟೆ ಮೊದಲೇ ಊಟ ಕೇಳಲು ಬಹಳ ಮುಜುಗರವಾಗುತ್ತಿರುತ್ತದೆ.

ಹೀಗೆ ಅತಿಥಿಗಳಿಗೂ ಆತಿಥ್ಯ ನೀಡುವವರಿಗೂ ವಿಧ ವಿಧವಾದ ಅನುಭವಗಳು ಆಗಿರಬೇಕಲ್ಲವೇ ?

ನೀವು ಎಂದಾದರೂ paying guest ಆಗಿದ್ದರೆ, ನಿಮ್ಮ ಅನುಭವವನ್ನು ಒಮ್ಮೆ ಮೆಲುಕು ಹಾಕಿ ನೋಡಿ. ಸದ್ಯ ನಾನು ಹೇಗೋ ಸುಧಾರಿಸಿಕೊಂಡು ಹೊರಬಂದೆ. ●

—ಕುಂಭಗೌಡನ ರಂಜಿತ್, ಮುಕ್ಕಂದೂರು.

## ನಿ ಧ ನ

ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿಯ, ಹಾಲಿ ನಿರ್ದೇಶಕರಾದ ಹೆರವನಾಡು ಗ್ರಾಮದ ಶ್ರೀ ಮೊಟ್ಟೆರ ಜಗದೀಶ್ [ಜಗ್ಗು]ರವರು ದಿನಾಂಕ 27-12-1998 ನೇ ಭಾನುವಾರ ತಮ್ಮ 48ನೇ ವಯಸ್ಸಿನಲ್ಲಿ ಹೃದಯಘಾತದಿಂದ ವೈಕುಂಠವಾಸಿಯಾದರು. ಶ್ರೀಯುತರಿಗೆ ಪತ್ನಿ ಹಾಗೂ ಇಬ್ಬರು ಮಕ್ಕಳು ಮತ್ತು ಅಪಾರ ಬಂಧು ಬಳಗದವರನ್ನು ಅಗಲಿದ್ದಾರೆ. ಇವರು ಕೊಡಗು ಸಂಗಾತಿಯ ಚಂದದಾರ ಮತ್ತು ಹಿತೈಷಿಯಾಗಿದ್ದರು. ಇವರ ಅಕಾಲ ಮರಣಕ್ಕೆ ಕೊಡಗು ಸಂಗಾತಿ ಕಂಬನಿ ಮಿಡಿಯುತ್ತದೆ.

## ಹಿತನುಡಿ

ಹೊಸದಾಗಿ ಉದ್ಭವಿಸುವ ಒಂದೊಂದು ಸಂಕಟವನ್ನು ಮುಂದೂಡದೆ ಎದುರಿಸುವುದೇ ಅನುಭವದ ಸೂಚನೆ.

—ಫ್ರೆಡ್ಜ್‌ಕುಂಕ್ ಸೆಲ್

## ಡಾ. ಪ್ರವೀಣನ ಕೊರಳಿಗೆ ಇನ್ನೊಂದು ಪ್ರತಿಷ್ಠಿತ ಪದವಿ

ಕೊಡಗು ಸಂಗಾತಿಯ ಆರೋಗ್ಯ ಚಿಂತನ ವಿಭಾಗದ ಲೇಖಕರಾದ ಡಾ|| ಎನ್. ಎಸ್. ಪ್ರವೀಣ ರವರಿಗೆ ಎಂ. ಡಿ. [M. D ] ಡಿಗ್ರಿಗೆ ಸರಿಸಮಾನವಾಗಿರುವ ಮತ್ತು ರಾಷ್ಟ್ರದಲ್ಲಿ ಹಾಗೂ ಅಂತರಾಷ್ಟ್ರದಲ್ಲೂ ಸಹ ಮಾನ್ಯತೆ ಇರುವ ಪ್ರತಿಷ್ಠಿತ "ಡಿ.ಎನ್.ಬಿ" [Diplomate of National Board] ಪದವಿ ಲಭಿಸಿರುತ್ತದೆ. 5-12-1998 ರಂದು ತಿರುವನಂತಪುರದಲ್ಲಿ ಜರುಗಿದ ರಾಷ್ಟ್ರಮಟ್ಟದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದರೊಂದಿಗೆ ಮತ್ತು ಎಂ ಡಿ. ಪದವಿಯ ಜೊತೆಗೆ ಈ ಪದವಿಯನ್ನು ಅವರು ತಮ್ಮದಾಗಿಸಿಕೊಂಡಿದ್ದಾರೆ.

# ಗೌಡರ ಆಚಾರ, ವಿಚಾರ, ನಡೆ, ನುಡಿ

ದಕ್ಷಿಣ ಕನ್ನಡ ಮತ್ತು ಕೊಡಗಿನ ಗೌಡ ಜನಾಂಗದವರು ಹತ್ತು ಬುಡಕಟ್ಟಿಗೆ ಮತ್ತು ಹದಿನೆಂಟು ಗೋತ್ರಗಳಿಗೆ ಸೇರಿದವರಾಗಿರುತ್ತಾರೆ. ಈ ಹತ್ತು ಬುಡಕಟ್ಟಿಗೆ ಸೇರಿದ ಜನರು ಹೀಗೆ ಬೇರೆ ಬೇರೆ ಕುಟುಂಬದ ಹೆಸರುಗಳನ್ನಿಟ್ಟು ಕೊಂಡಿರುವರು. ಆದ ಕಾರಣ ಹೀಗೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಮಾರು 400 ಕುಟುಂಬದ ಹೆಸರಿನಿಂದಲೂ ಕೊಡಗಿನಲ್ಲಿ ಸುಮಾರು 350 ಕುಟುಂಬದ ಹೆಸರಿನಿಂದ ಕರೆಯಲ್ಪಡುವುದು. ಕೆಲವು ಕಡೆಗಳಲ್ಲಿ ಆಯಾ ಸ್ಥಳದ ಹೆಸರನ್ನೇ ಕುಟುಂಬದ ಹೆಸರನ್ನಾಗಿ ಇಟ್ಟುಕೊಂಡಿರುವರು. ಇನ್ನು ಕೆಲವು ಕಡೆ ಗೌಡ ಕುಟುಂಬದ ಹೆಸರೇ ಆ ಗ್ರಾಮಕ್ಕಿರುವುದು. ಅಂತೂ ಒಟ್ಟು ಗೌಡ ಕುಟುಂಬವು 700 ರಿಂದ 800 ಹೆಸರುಗಳಿಂದ ಕರೆಯಲ್ಪಡುವುದು.

ಗೌಡ ಜನಾಂಗದವರು ಹೆಚ್ಚಾಗಿ ಅರೆಭಾಷೆಯನ್ನೇ ಮಾತನಾಡುತ್ತಾರೆ. ಕೆಲವು ಕಡೆಗಳಲ್ಲಿ ಮಾತ್ರ ತುಳು ಭಾಷೆ, ಕೊಡವ ಭಾಷೆ ಮತ್ತು ಕನ್ನಡ ಭಾಷೆ ಮಾತನಾಡುತ್ತಾರೆ. ಒಂದೇ ಗೋತ್ರದೊಳಗೆ ಪರಸ್ಪರ ವಿವಾಹವು ನಿಶಿದ್ಧವಾಗಿದೆ.

**ಉಡಿಗೆ ತೊಡಿಗೆಗಳು :**

ಗೌಡ ಜನಾಂಗದ ಪುರುಷರು ಹೆಚ್ಚಾಗಿ ಶರ್ಟು, ಪಂಚೆ, ಕೋಟು, ಪ್ಯಾಂಟ್, ಟೋಪಿ, ರುಮಾಲು, ಶಾಲುಗಳನ್ನು ಧರಿಸುವರು. ವಿವಾಹ ಸಮಾರಂಭಗಳಲ್ಲಿ ಮಾತ್ರ ಕಡ್ಡಾಯವಾಗಿ ವರನು ಬಿಳಿಯ ಶರಟು, ಕಚ್ಚೆಹಾಕಿ ಪಂಚೆಯುನ್ನುಟ್ಟು ಶಾಲು ಹಾಕುವರು. ಮತ್ತು ಕೆಲವರು ಬಿಳಿ ಕೋಟು, ಟೈಯನ್ನು ಧರಿಸುವರು. ಅಲ್ಲದೆ ತಲೆಗೆ ಪೇಟ ರುಮಾಲು ಕಟ್ಟುವರು.

ಹಿಂದಿನವರು ಹೆಚ್ಚಾಗಿ ಕಿವಿಗೆ ಒಂಟಿ ಯಾ ಕಡಕು ಎಂಬ ಚಿನ್ನದ ಆಭರಣವನ್ನು ಹಾಕಿಕೊಂಡಿರುವರು. ಈಗ ಅದು ಕಡಿಮೆಯಾಗಿದೆ.

ಸ್ತ್ರೀಯರು ಹೆಚ್ಚಾಗಿ ಸೆರಗು ಹಾಕಿ ಸೀರೆಯನ್ನುಡುವರು. ಕೊಡಗಿನಲ್ಲಿ ವಯಸ್ಕರು ಮತ್ತು ಗ್ರಾಮಾಂತರ ಪ್ರದೇಶಗಳಲ್ಲಿ ಗೇಂಟಿ ಕಟ್ಟಿ ಸೀರೆಯನ್ನುಡುವರು. ಹಾಗೆ ಸೀರೆ ಉಡುವವರು ಉದ್ದ ಕೈ ಉಳ್ಳ ಜಾಕೇಟು [ರವಕೆ]ನ್ನು ಧರಿಸುತ್ತಾರೆ. ಗೌಡ ವಿವಾಹಿತ ಸ್ತ್ರೀಯರ ಶ್ರೇಷ್ಠವಾದ ಆಭರಣವೆಂದರೆ ತಾಳಿ [ಮಾಂಗಲ್ಯ] ಅದನ್ನು ನಿತ್ಯವೂ ಕುತ್ತಿಗೆಯಲ್ಲಿ ಧರಿಸಿಕೊಂಡಿರಬೇಕೆಂಬ ನಿಯಮವಿದೆ. ಮುತ್ತೈದೆ ಹೆಂಗಸು ತಾಳಿ ಇಲ್ಲದೆ ಮೂಡಣ ಕಟ್ಟಳೆ ದಾಟಬಾರದೆಂದೂ ಮತ್ತು ಪತಿಗೆ ಊಟ ಬಳಸಬಾರದೆಂಬ ನಿಯಮವು ಆಚರಣೆಯಲ್ಲಿದೆ.

ವಿವಾಹಿತ ಸ್ತ್ರೀಯರು ಕೈಗೆ ಗಾಜಿನ ಬಳೆಯನ್ನು ಹಾಕಿಕೊಂಡಿರಬೇಕೆಂಬ ನಿಯಮವಿದೆ. ನವ ವಧುವಿಗೆ ಬಳೆ ತೊಡಿಸುವುದು ಮದುವೆಯ ಮೊದಲ ಶುಭ ಕಾರ್ಯ. ಹೆಣ್ಣು ಮಕ್ಕಳಿಗೆ ಚಿಕ್ಕಂದಿನಿಂದಲೆ ಕಿವಿ ಮೂಗು ಚುಚ್ಚಿರುತ್ತಾರೆ. ಕಿವಿಗೆ ಓಲೆಯನ್ನು ಮೂಗಿಗೆ ಮೂಗುತಿಯನ್ನು ಧರಿಸುತ್ತಾರೆ. ವಧುವು ಮೂಗು ಚುಚ್ಚಿಸಿಕೊಳ್ಳದಿದ್ದಲ್ಲಿ ಮದುವೆಯಲ್ಲಿ ಆ ವಧುವನ್ನು ಧಾರೆ ಎರೆಯುವುದು ನಿಶಿದ್ಧ. ಆದ್ದರಿಂದ ಮದುವೆಯ ಸಂದರ್ಭದಲ್ಲಾದರೂ ವಧುವನ್ನು ಮೂಗು ಚುಚ್ಚಿಸಿ ಮೂಗುತಿ ಹಾಕಿಸಿ ಧಾರೆ ಎರೆಯುತ್ತಾರೆ. ಮುತ್ತೈದೆ ಭಾಗ್ಯವೆಂದೇ ಮೂಗುತಿಗೆ ಬಿರುದಾಂಕಿತ. ಕಿವಿಯ ಓಲೆಗೆ ಓಲೆ ಭಾಗ್ಯವೆನ್ನುವರು.

ಹೆಣ್ಣು ಮಕ್ಕಳಿಗೆ ಸಣ್ಣ ಪ್ರಾಯದಲ್ಲಿ ಬಳೆಯು ಅಲಂಕಾರವಾದರೆ ಮದುವೆಯಾದ ಹೆಣ್ಣಿಗೆ ಬಳೆಯು ಸೌಭಾಗ್ಯದ ಸೂಚನೆಯಾಗಿದೆ.

ಸೌಭಾಗ್ಯವತಿಯಾದ ಮನೆಯ ಗೃಹಿಣಿಯು ಅರುಣೋದಯಕ್ಕೆ ಮೊದಲು ಎದ್ದು ಪ್ರಾತರ್ ವಿಧಿಗಳನ್ನು ಮುಗಿಸಿ ಮನೆಯನ್ನು ಸ್ವಚ್ಛಮಾಡಿ ದೇವರಿಗೆ ದೀಪ ಹಚ್ಚಿ ಪ್ರಾರ್ಥಿಸಿ ಹಣೆಗೆ ಕುಂಕುಮವನ್ನಿಟ್ಟುಕೊಂಡು ತಾಳಿಗೂ ಕುಂಕುಮವನ್ನಿಟ್ಟುಕೊಂಡು ನಂತರ ಮನೆ ಕೆಲಸವನ್ನು ಪ್ರಾರಂಭಿಸುವುದು ರೂಢಿಯಾಗಿದೆ.

## ಗೌಡ ಜನಾಂಗದ 18 ಗೋತ್ರಗಳು

1. ಕಬರ್ ಗೋತ್ರ
2. ನಂದರ ಗೋತ್ರ
3. ಹೆಮನ ಗೋತ್ರ
4. ಬಂಗಾರ ಗೋತ್ರ
5. ಸೆಟ್ಟಿ ಗೋತ್ರ [ಹಾಲುಗುಂಡರ]
6. ಮೌಲ್ಯರ ಗೋತ್ರ [ಮೂಲಾರ್]
7. ಗೌಡ ಗೋತ್ರ
8. ಸಾಲೆ ಗೋತ್ರ
9. ಗೋಳಿ ಗೋತ್ರ
10. ನಾಯರ್ ಗೋತ್ರ
11. ಬಳಸನ್ನ ಗೋತ್ರ
12. ಕರ್ಬನ್ನ ಗೋತ್ರ
13. ಓದನ್ನ ಗೋತ್ರ
14. ಚಾಲ್ಯರ ಗೋತ್ರ
15. ಕರ್ಂಬೆರ್ ಗೋತ್ರ
16. ಚಿತ್ತರ ಗೋತ್ರ
17. ಗುಂಡರ ಗೋತ್ರ
18. ಲಿಂಗಾಯಿತ ಗೋತ್ರ

[13ನೇ ಪುಟ ನೋಡಿ]

# ಕೊಡಗು ಬಂಡಾಯ

ಮಡಿಕೇರಿ ಸೆಂಟ್ರಲ್ ಸ್ಕೂಲಿನ ಪ್ರಿನ್ಸಿಪಾಲನಾಗಿದ್ದ ರೆವರೆಂಡ್ ಜಿ. ರಿಕ್ತರನು "ಗ್ಯಾಜಿಟಿಯರ್ ಆಫ್ ಕೂರ್ಗ್" 1870 ರಲ್ಲಿ ಪ್ರಕಟಿಸಿದನು. ಇದರ ಚರಿತ್ರಾ ವಿಭಾಗದಲ್ಲಿ ಪ್ರಕಟವಾಗಿರುವ ಈ ಲೇಖನವನ್ನು ಕನ್ನಡಕ್ಕೆ ಅನುವಾದಿಸಲಾಗಿದೆ. ಕೊಡಗರನ್ನು ಹೋಲುವ ಸ್ವಭಾವದ ಗೌಡರು ಹೇಗೆ ಬ್ರಿಟೀಷರ ಶತ್ರುಗಳಾಗಿ ಅವರ 110 ವರ್ಷಗಳ ಆಳ್ವಿಕೆಯಲ್ಲಿ ಅನಕ್ಕಪೆಗೆ ತುತ್ತಾಗಿ, ಅವನತಿಯನ್ನು ಹೊಂದಿದರೆಂಬುದು ಈ ಲೇಖನದಿಂದ ತಿಳಿದುಕೊಳ್ಳಬಹುದು.

ಅನುವಾದಕರು : ಎನ್. ಎಸ್. ದೇವಿಪ್ರಸಾದ್, ಸಂಪಾಜೆ

ಕೊಡಗು ಬಂಡಾಯವೆಂದು ಕರೆಯಲ್ಪಡುವುದು ನಿಜವಾಗಿ ಹೇಳುವುದಾದರೆ ಗೌಡರ ಮೇಲ್ಬೀಳುವಿಕೆ. ಇವರು ಕೊಡಗರನ್ನು ಹೋಲುವ ಸ್ವಭಾವವನ್ನು ಹೊಂದಿದ್ದ ಘಾಟಿಯ ಪಶ್ಚಿಮ ಇಳಿಜಾರು ಪ್ರದೇಶದಲ್ಲಿರುವ ಜನಾಂಗ. ಇವರಿಗೆ ಕಂಪೆನಿ ಸರಕಾರದ ಬಗ್ಗೆ ಅಸಂತುಷ್ಟಿ ಇತ್ತು. ಕೊಡಗನ್ನು ಸ್ವಾಧೀನಪಡಿಸಿಕೊಂಡ ಬಳಿಕ ಅಮರಸುಳ್ಯ, ಪುತ್ತೂರು ಮತ್ತು ಬಂಟ್ವಾಳ ಜಿಲ್ಲೆಗಳು ಮಂಗಳೂರು ಸಮೀಪ ಇದ್ದು ಅವುಗಳನ್ನು ಕೆನರಾ ಪ್ರಾಂತ್ಯಕ್ಕೆ ವರ್ಗಾಯಿಸಲಾಯಿತು. ಹಿಂದೆ ಕೆನರಾದಿಂದ ಇವುಗಳನ್ನು ತೆಗೆದುಕೊಂಡದಾಗಿತ್ತು. ಕೊಡಗು ರಾಜರ ಕಾಲದಲ್ಲಿ ಕಂದಾಯ ವಸ್ತುರೂಪದಲ್ಲಿದ್ದಿತು. ಮಂಗಳೂರು ಕಲೆಕ್ಟರ್ ಆಗ ಹಣದಲ್ಲಿ ಪಾವತಿಸುವಂತೆ ಒತ್ತಾಯಿಸಿದರು. ಇದರಿಂದಾಗಿ ರೈತರು-ವರ್ತಕರ ಕೃಪೆಯಡಿಯಲ್ಲಿರಬೇಕಾಗಿ ಬಂದದ್ದು, ಅಸಂತೋಷಕ್ಕೆ ಕಾರಣವಾಯಿತು. ನಾಲ್ಕು ದಿವಾನರ ಪೈಕಿ ಒಬ್ಬನಾದ ಲಕ್ಷ್ಮೀನಾರಾಯಣನೆಂಬ ಹೆಸರಿನ ಬ್ರಾಹ್ಮಣನು ಕೊಡಗಿನ ತನ್ನ ಸಹ ದಿವಾನರ ಪ್ರಾಬಲ್ಯದ ಬಗ್ಗೆ ಅಸಮಧಾನ ಹೊಂದಿದ್ದು, ಈ ಪರಿಸ್ಥಿತಿಯಲ್ಲಿ ಗೌಡರ ಅಸಂತುಷ್ಟಿಯನ್ನು ರಾಜಕೀಯ ಲಾಭಕ್ಕೆ ಉಪಯೋಗಿಸಿದನು. ಆತನ ಸಹೋದರ ಕೆಳ ರಾಜ್ಯದ ಸುಳ್ಯದಲ್ಲಿದ್ದನು. ಶ್ರೀಮಂತರೂ, ಪ್ರಭಾವಶಾಲಿಗಳೂ ಆಗಿದ್ದ ಅತೃಪ್ತ ಗೌಡರ ಒಕ್ಕೂಟದಲ್ಲಿದ್ದ ಆತನು ಅಪರಂಪರನ ಕಾರ್ಯವನ್ನು ಬೆಂಬಲಿಸಿದ್ದನು.

ಬಂಡಾಯಗಾರರು ಸುಳ್ಯದಲ್ಲಿ ಬಂದು ಸೇರಿದರು. ಅವರೊಂದು ಜನಜಂಗುಳಿಯಾಗಿ ಸೇರಿವರೂ ಕೂಡಾ ಪುತ್ತೂರಿನಲ್ಲಿ ಮಂಗಳೂರು ಕಲೆಕ್ಟರ್ ಮತ್ತು ಎರಡು ಸೈನ್ಯದ ತುಕಡಿಯ ಮೇಲೆ ಧಾಳಿ ನಡೆಸಿ ಜಯಶಾಲಿಗಳಾದರು. ಇದರಿಂದ ಧೈರ್ಯ ಹೆಚ್ಚಿತಲ್ಲದೆ ಸಂಖ್ಯೆಯೂ ಹೆಚ್ಚಿತು. ಒಂದು ತಂಡವು ಮಂಗಳೂರಿಗೆ ಹೋಗಿ ಜೈಲು ತೆರೆದು ಅವರನ್ನು ಬಿಡಿಸಿಕೊಂಡು, ಕಛೇರಿಯನ್ನು ಗುಡ್ಡದ ಮೇಲಿದ್ದ ಕೆಲವು ನಾಗರಿಕರ ಸೇರಿಸಿ ಮನೆಗಳನ್ನು ಲೂಟಿ ಮಾಡಿ ಸುಟ್ಟುಹಾಕಿದರು. ಅಲ್ಲಿದ್ದ ಎಲ್ಲಾ ಯುರೋಪಿಯನರು ದಿಗಿಲುಗೊಂಡರು. ಮತ್ತು ಕಣ್ಣಾನೂರಿಗೆ ಹೊರಟ ಹಡಗನ್ನು ಹತ್ತಿ ನಾಗರಿಕರೆಲ್ಲಾ ಓಡಿ ಹೋದರು. ತಮ್ಮ ಮನೆಗಳು ದಳ್ಳುರಿಯಲ್ಲಿ ಸಿಲುಕಿರುವುದನ್ನು ನೋಡಿದಾಗ ಇಡೀ ದೇಶವೇ ಶಸ್ತ್ರ ಎತ್ತಿಕೊಂಡಂತೆ ಕಾಣುತ್ತಿತ್ತು. ಕಮಾಂಡಿಂಗ್ ಆಫೀಸರನು ಯುದ್ಧದ ಮಾತುಕತೆ ನಡೆಸಿದನು. ಅವಶ್ಯಕತೆಯ ಶೌರ್ಯದಿಂದೊಂದಿಗೆ ರಕ್ಷಣಾ ಪಡೆಯನ್ನು ಹಡಗು ಹತ್ತಿಸಬೇಕಾಯಿತು. ಅದೂ ಕೂಡಾ ಸಾಕಷ್ಟು ದುರ್ಬಲವಾಗಿತ್ತು. ಸೋತು, ಚದರಿದ ಹಲವಾರು ಸೇನಾ ತಂಡಗಳು ಸಾವಿರಾರು ಗೌಡರ ಮತ್ತು ಜೈಲಿನ ಜನ ಜಂಗುಳಿಯನ್ನು ಎದುರಿಸಲಾಗದೆ ಸಿಕ್ಕಿದಷ್ಟು ದೋಣಿಗಳಲ್ಲಿ ಹತ್ತತೊಡಗಿತು. ಕಣ್ಣಾನೂರಿನಿಂದ ಮತ್ತು ಬೊಂಬೈಯಿಂದ ಕೂಡಲೇ ಸೈನ್ಯ ಕಳುಹಿಸಲ್ಪಟ್ಟಿತು. ಆದರೆ ಅವರು ಬಂದು ತಲುಪಿದಾಗ ಹೋರಾಡಲು ಯಾರೂ ಇದ್ದಿರಲಿಲ್ಲ. ಮಂಗಳೂರು ರಕ್ಷಣಾಪಡೆಯ ಸಮಯಪ್ರಜ್ಞೆಯನ್ನು ಮರಳಿ ಪಡೆದು, ಏನೂ ತೊಂದರೆ ಇಲ್ಲದೆ ಶಾಂತಿ ಮರುಸ್ಥಾಪನೆ ಮಾಡಿತು.

ಇದು ಸಂಪೂರ್ಣವಾಗಿ ಗೌಡರ ವ್ಯವಹಾರವಾದರೂ ಕೂಡಾ, ಬಂಡೇಳುವ ಅಭಿಪ್ರಾಯ ನಾಲ್ಕು ನಾಡು ಮತ್ತು ಬೆಪ್ಪುನಾಡು ಕೊಡಗರಲ್ಲಿ ಮತ್ತು ಪಂಜ, ಬೆಳ್ಳಾರೆ ಮತ್ತು ಸುಬ್ರಹ್ಮಣ್ಯ ಜಿಲ್ಲೆಗಳ ಬಡಗರಲ್ಲಿ ಮತ್ತು ಉತ್ತರ ಕೊಡಗಿನ ನಿವಾಸಿಗಳಾಗಿ ರಾಜನ ನಂಬಿಕಸ್ಥ ಮತ್ತು ಆಶ್ರಿತ ಶಿವಾಚಾರಿಗಳು ಒಳಗೊಂಡಿದ್ದರು. ಅಷ್ಟೇ ಅಲ್ಲದೆ ದಿ|| ದಿವಾನ ಕುಂಟಬಸವನ ಸಂಬಂಧಿಕರು, ಆಪ್ತರು ಮತ್ತು ಅವಶ್ಯ ಉಪಕಾರಿಗಳಾಗಿ ಸದಾ ತಯಾರಾಗಿದ್ದರು. ಮೊದಲು ಹುಕುಂನಾಮೆ ಹೊರಡಿಸಿದ್ದು ಸಂದೇಹಾಸ್ಪದ ವ್ಯಕ್ತಿ, ಅಪರಂಪಾರನ ಹೆಸರಲ್ಲಿ ಈಗ ಆತ ಎಲ್ಲಿಲ್ಲೂ ಇದ್ದಾನೆ, ಎಲ್ಲೂ ಇಲ್ಲ ಎನ್ನುವಂತಾಗಿದೆ. ಘನವೆತ್ತ ಹಾಲೇರಿಯ ರಾಜಕುಮಾರ ತನ್ನ ಹಕ್ಕು ಸ್ಥಾಪನೆ ಮಾಡಲಿದ್ದು ಕೊಡಗರು ಮತ್ತು ರಾಜ್ಯದ ಇತರ ನಿವಾಸಿಗಳು ಸೇವೆ ನೀಡಲು ಬರಬೇಕೆಂದು ಕರೆ ನೀಡಲಾಗಿತ್ತು. ತಲಕಾವೇರಿ

ಮತ್ತು ನಾಲ್ಕು ನಾಡುಗಳಲ್ಲಿ ಸಾಕಷ್ಟು ಕೊಡಗರು ಮತ್ತು ಗೌಡರು ಈ ಹುಕುಂನಾಮೆಯಲ್ಲಿದ್ದ ರಾಜಮುದ್ರೆ ಮತ್ತು ಇದರ ಸಂದೇಶವಾಹಕರು ಕೊಟ್ಟ ಭರವಸೆಗಳನ್ನು ನಂಬಿದ್ದರು. ಅವರು ಆಯುಧ ತೆಗೆದುಕೊಂಡು ಪ್ರಧಾನ ಕಛೇರಿಯಾದ ಸುಳ್ಯದ ಕಡೆ ಇಳಿದುಹೋದರು. ಅಪರಂಪರನ ಪತ್ರ ಬೆಪ್ಪು ನಾಡಿಗೆ ಕೊಂಡೊಯ್ಯಲ್ಪಟ್ಟಿತು. ಅಲ್ಲಿನ ಕೊಡಗರು ಅಧಿಕಾರಿಗಳು ಮತ್ತು ಇತರರು ಆಶ್ಚರ್ಯ ಹೊಂದಿದರು ಏನನ್ನು ನಂಬಬಹುದು ಎನ್ನುವುದು ಗೊತ್ತಾಗದೇ ಅಪಾಯರಹಿತ ಯಾವುದೆಂದು ಪರಿಶೀಲಿಸುವಲ್ಲಿ ಆತಂಕಗೊಂಡರು.

ಒಂದೆರಡು ದಿನಗಳಲ್ಲಿ ವಿರಾಜಪೇಟೆಯಿಂದ ಒಂದು ನಿಯೋಗ ಮಡಿಕೇರಿಗೆ ಹೋಗಿ ದಿವಾನರುಗಳಿಗೆ ವಿಚಾರ ತಿಳಿಸಿ, ಅವರ ಅಭಿಪ್ರಾಯ ಕೇಳಿತು. ಕ್ಯಾಪ್ಟನ್ ಲಿ ಹಾರ್ಡಿ ಸೂಪರಿಂಟೆಂಡನು ಎಚ್ಚೆತ್ತುಕೊಂಡನು. ದಿವಾನರುಗಳೊಡನೆ ಸಮಾಲೋಚನೆ ನಡೆಸಿ, ಪೊನ್ನಪ್ಪನನ್ನು ಮಡಿಕೇರಿಯಲ್ಲಿಟ್ಟು, ಬೋಪು ಮತ್ತು ಸಂಗಡಿಗರೊಂದಿಗೆ ಸುಳ್ಯದ ಕಡೆ ಸಂಪಾಜೆ ತನಕ ಹೋದನು. ಬೋಪುಗೆ ಸಿಕ್ಕಿದ ಮಾಹಿತಿ ಪ್ರಕಾರ ಬಂಡಾಯಗಾರರು ಅಲ್ಲಿಗೆ ತಲುಪಬೇಕಿತ್ತು. ಕ್ಯಾಪ್ಟನ್ ಲಿಹಾರ್ಡಿ ಘಟ್ಟದ ಬುಡದಲ್ಲಿರುವ ಸಂಪಾಜೆಯ ದೂರದ ಕಠಿಣದ ದಾರಿಯಲ್ಲಿ ನಡೆದ. ಅಲ್ಲಿ ನೋಡಿದರೆ ಬಂಡಾಯಗಾರರು ಇರಲೇ ಇಲ್ಲ. ಉತ್ತರಕೊಡಗಿನ ಬಿಸ್ಲೆ ಘಾಟ ಕಡೆ ಅವರು ಹೋಗಿದ್ದಾರೆಂದು ತಿಳಿದುಬಂತು. ಬಂಡಾಯಗಾರರನ್ನು ಆ ದಟ್ಟ ಕಾಡಿನ ಮೂಲಕ ಹಿಂಬಾಲಿಸುವುದು ಅಸಾಧ್ಯವಾಗಿತ್ತು. ಸಾಮಾನ್ಯ ಪ್ರಯಾಣಿಕರಿಗೆ ಆ ದಾರಿ ಕಷ್ಟಕರವಾಗಿತ್ತು. ಆದ ಕಾರಣ ಆತ ಮಡಿಕೇರಿಗೆ ಹಿಂತಿರುಗಿದನು. ಮತ್ತೆ ಮೇಲಿನ ಕೊಡಗು ಮೂಲಕವಾಗಿ ಬಂಡಾಯಗಾರರು ಬೇಟೆಯಾಗುವ ಸ್ಥಳವೆನ್ನಿಸಿಕೊಂಡಲ್ಲಿಗೆ ಪ್ರಯಾಣಿಸಿದನು. ಬೋಪುವನ್ನು ಜತೆಗೂಡಿಕೊಂಡು ಅಲ್ಲಿಗೆ ತಲುಪಿದಾಗ ಯಾವನೂ ಬಂಡಾಯಗಾರ ಕಾಣಿಸಲಿಲ್ಲ. ಶತ್ರುಗಳು ಸಂಪಾಜೆಯಲ್ಲಿದ್ದಾರೆಂಬ ಸುದ್ಧಿ ಗುಪ್ತಚಾರರು ತಂದರು. ಅಲ್ಲಿಂದ ಕಡಮಕಲ್ಲು ಮೂಲಕ ಸಂಪಾಜೆಗೆ ಪ್ರಯಾಣಿಸಿದನು. ಸೂಪರಿಂಟೆಂಡೆಂಟ್‌ಗೆ ಆತನ ದಿವಾನನ ಮೇಲೆ ಸಂಶಯ ಉಂಟಾಗತೊಡಗಿತು. ಮಡಿಕೇರಿಗೆ ಮರಳಿ ಬಂದು ತಲುಪಿದಾಗ ಬೋಪು ಮೇಲೆ ಇದ್ದ ಅತೃಪ್ತಿ ಇದ್ದ ಇನ್ನೊಬ್ಬ ದಿವಾನ ಪೊನ್ನನಿಂದ "ಬೋಪುವಿನ ಸಾಕಷ್ಟು ಮಂದಿ ಸಂಬಂಧಿಕರು ಬಂಡಾಯಗಾರರನ್ನು ಸೇರಿದ್ದಾರೆ" ಎಂಬ ವರ್ತಮಾನ ಸಿಕ್ಕಿತು. ಕ್ಯಾಪ್ಟನ್ ಲಿ ಹಾರ್ಡಿಯ ಸಂಶಯ ಸಾಬೀತಾದಂತಾಯಿತು. ಆತ ಬೋಪುವನ್ನು ಕರೆದು ವಿದ್ರೋಹದ ಆರೋಪವನ್ನು ನೇರವಾಗಿ ಆತನ ಮೇಲೆ ಹೊರಿಸಿದನು. "ಹೋಗು ಇಳಿದು, ನಿನ್ನ ಸ್ನೇಹಿತ ಬಂಡಾಯಗಾರರನ್ನು ಸೇರಿಕೋ. ಮುಚ್ಚುಮರೆಯಿಲ್ಲದೆ ಶತ್ರುವಾಗು ಹೋಗು ನಾನು ನಿನ್ನನ್ನು ಹಿಂಬಾಲಿಸಿ ಬರುತ್ತೇನೆ. ಮತ್ತೆ ನಾನು ನಿನ್ನನ್ನು ಹಿಡಿದದ್ದೇ ಆದರೆ ನೇಣುಗಂಬಕ್ಕೆ ಏರಿಸುತ್ತೇನೆ. ಬೋಪುವೂ ಕೂಡಾ ಆತನ ಸ್ನೇಹಿತ ಪೊನ್ನಪ್ಪನಂತೆ ಕಂಪೆನಿಯ ಪ್ರಾಮಾಣಿಕ ಸೇವಕನಾಗಿದ್ದು ವಿಪರೀತ ಗಾಬರಿಗೊಂಡನು. ಕಾಣುವಂತೆ ಎಲ್ಲವೂ ಆತನಿಗೆ ವಿರುದ್ಧವಾಗಿತ್ತು. ಆದರೂ ಆತ ಮುಗ್ಧನಾಗಿದ್ದನು. ಆದರೆ ಯಜಮಾನನ ನಂಬಿಕೆ ಕಳೆದುಕೊಂಡು ಮತ್ತೆ ಗಳಿಸಬೇಕಾಗಿತ್ತು. ಕಣ್ಣೀರು ಸುರಿಸುತ್ತಾ ಕುಸಿದು ಕುಳಿತ ಆತ ತನ್ನ ಪ್ರಾಮಾಣಿಕತೆಯನ್ನು ಹತಾಶೆ ಮಾತುಗಳಿಂದ ಬಣ್ಣಿಸಿದ. "ಕ್ಯಾಪ್ಟನ್ ಲಿ ಹಾರ್ಡಿ ನೀವು ಇಲ್ಲಿಯೇ ಉಳಿಯಿರಿ. ಈ ನೀಚ ಬಂಡಾಯಗಾರರನ್ನು ತುಳಿದು ಹಾಕಲು ನನ್ನನ್ನು ಬಿಡಿರಿ. ಸಂದರ್ಭಕ್ಕೆ ತಕ್ಕ ಹಾಗೆ ನಡೆದುಕೊಳ್ಳುವ ಅಧಿಕಾರ ನನಗೆ ಕೊಡುವ ಜವಾಬ್ದಾರಿ ನೀವು ತೆಗೆದುಕೊಳ್ಳುವುದಾದರೆ ನಾನು ಅದರ ಮುಖ್ಯಸ್ಥರನ್ನು ಜೀವಂತವಾಗಿ ಅಥವಾ ಶವಗಳಾಗಿ ತಂದೊಪ್ಪಿಸಲು ಈಗಲೇ ಹೊರಡುತ್ತೇನೆ. ಕ್ಯಾಪ್ಟನ್ ಲಿ ಹಾರ್ಡಿಗೆ ಈ ವ್ಯಕ್ತಿ ಸತ್ಯವಂತ ಅನ್ನಿಸಿ, ಆತನಿಗೆ ಬೇಕಾದ್ದು ಮಾಡಲು ಅನುಮತಿ ಕೊಟ್ಟನು.

ಬೆಪ್ಪುನಾಡಿನ ಮತ್ತು ಇತರ ಜಿಲ್ಲೆಗಳ ಕೊಡಗರು ಇದೇ ಸಮಯದಲ್ಲಿ ಮಡಿಕೇರಿಗೆ ಬಂದು ಸೇರಿದ್ದರು. ಸುಭೇದಾರ ಅಪ್ಪಚ್ಚಣ್ಣ [1870ರಲ್ಲಿ ಮುಖ್ಯ ಶಿರಸ್ತೇದಾರನಾಗಿದ್ದನು.] ನ ಸಂಗಡ ಆರವತ್ತು ಜನರ ತುಕಡಿ ಉತ್ತರಕ್ಕೆ–ಬೋಪು ಜತೆ ನೇರವಾಗಿ ಕೆಳಗೆ ಸಂಪಾಜೆ ಕಡೆ ಹೊರಟಿತು. ತನ್ನದೇ ಶೈಲಿಯಲ್ಲಿ ಇಬ್ಬರು ಕೊಡಗು ಪ್ರತಿನಿಧಿಗಳು ಮುಂದುವರಿದರು. ಇಬ್ಬರು ಕೂಲಿಗಳು ಹೊಸದಾಗಿ ಕತ್ತರಿಸಿದ ಬೆತ್ತದ ಹೊರೆಯನ್ನು ಹೊತ್ತಿದ್ದರು. ದಿವಾನನು ಬಂಡಾಯಗಾರರಿಗೆ ನಿಜವಾದ ಅರ್ಥದಲ್ಲಿ ಸಿಕ್ಕಿಸಬೇಕೆಂಬ ನಿರ್ಧಾರಕ್ಕೆ ಬಂದಿದ್ದನ್ನು ನಾಲ್ಕು ನಾಡಿನ ಮುಖ್ಯ ಸ್ನೇಹಿತರು ಆತನ ಸುತ್ತುವರಿದರು. [illegible] ದಿವಾನನಿಗಿಂತ ತಾವು ಮುಂದೆ ಆತನ ದಾರಿಯ ಅಪಾಯ ನಿವಾರಿಸುತ್ತಾ ನಡೆದು ಹೋಗುತ್ತಿದ್ದರು. ಯಾಕೆಂದರೆ ಚೆಟ್ಟಿಕುಡಿಯ ಬೋಪುವನ್ನು ಕಂಡಲ್ಲೇ ಗುಂಡಿಕ್ಕಿ ಕೊಲ್ಲುವುದಾಗಿ ಪ್ರಮಾಣ ಮಾಡಿದ್ದನು. ಆತ ಮಲೆಕುಡಿಯರ ಪಂಗಡಕ್ಕೆ ಸೇರಿದವನಾಗಿದ್ದು, ಲಿಂಗರಾಜನಿಗೆ ಕೋವಿ ವಿದ್ಯೆಯ ಗುರುವಾಗಿದ್ದು ಆತನ ಆಪ್ತನಾಗಿದ್ದನು. ಈತನು ಹಾರು

ತ್ತಿರುವ ಹಕ್ಕಿಯ ಕಣ್ಣಿಗೆ ಗುರಿ ಹೊಡೆದಿದ್ದನೆಂಬ ವದಂತಿ ಇದ್ದಿತು. ತುಕಡಿಯು ರಾಜಾಸೀಟು ದಾಟಿ ಹೋಗಿರಲಿಲ್ಲ. ಇನ್ನೇನು ಘಟ್ಟವನ್ನು ಇಳಿಯಬೇಕೆನ್ನುವಷ್ಟರಲ್ಲಿ ಎರಡು ಜನ ದುರದೃಷ್ಟಶಾಲಿ ಮುಖ್ಯಸ್ಥರಾದ ಮಾಜಿ ಸುಭೇದಾರ ಮುದ್ದಯ್ಯ [ಲೆವಿನ್‌ನ ವರದಿಯಲ್ಲಿ ಕಾಣಿಸಿಕೊಂಡ ಸುಭೇದಾರ ಮಾದಯ್ಯ ಆಗಿರಬಹುದೇ ?] ಮತ್ತು ಪೌತಿ ಪಾರಪತಿಗಾರ ಅಪ್ಪಯ್ಯ ಕಾಣಸಿಕ್ಕಿದರು. ಬೋಪುವಿಗೆ ಅವರು ಪರಿಚಿತರಾಗಿದ್ದರು. ಅವರು ಬಂಡಾಯದ ಸುಳಿವು ಆತನಿಗೆ ತಿಳಿಸಿರಲಿಲ್ಲ. ಅವರಿಗೆ ಖಂಡಿತವಾಗಿ ವಿಚಾರ ತಿಳಿದಿತ್ತು. ಸರಿಯಾದ ಸಮಯದಲ್ಲಿ ವಿಚಾರ ತಿಳಿಸಿದ್ದರೆ ಆತನಿಗೆ ಹೀನವಾದ ಅಪಮಾನದ ಅಪಾಯ ಇರುತ್ತಿರಲಿಲ್ಲ. ಏನೋ ಸರ್ವನಾಶದ ಅಂಚಿನಲ್ಲಿ ಉಳಿದುಕೊಂಡನು. ಆದ ಕಾರಣ ಆತನ ಜತೆಗಾರರಲ್ಲಿ ಕೆಲವರಿಗೆ ಅವರನ್ನು ವಶಕ್ಕೆ ತೆಗೆದುಕೊಳ್ಳಲು ಹೇಳಿದನು. ಮತ್ತೆ ಕೆಲವರಿಗೆ ಒಂದೊಂದು ಬೆತ್ತ ತೆಗೆದುಕೊಳ್ಳಲು ಹಾಗೂ ಅವರಿಗೆ ಚೆನ್ನಾಗಿ ಬಾರಿಸಲು ಹೇಳಿದನು. ಕ್ರೂರ ಕೈಗಳು ಅವರನ್ನು ಹಿಡಿದು ಕೋಟುಗಳನ್ನು ಕಿತ್ತೆಸೆದಾಗ, ಆ ಅದೃಷ್ಟಹೀನರು ಯಾಕೆ ಹೀಗೆ ಮಾಡುತ್ತಿದ್ದೀರೆಂದು ಕೇಳಿದಕ್ಕೆ ಉತ್ತರವಾಗಿ ಏಟುಗಳು ಬೀಳುತ್ತಿದ್ದವು. ಅವರು ಅರೆಜೀವವಾಗಿ ನೆಲಕ್ಕುರುಳಿದನಂತರ ಅವರನ್ನು ಬಿಟ್ಟು ಬೋಪು ಮುನ್ನಡೆದನು.

ಸಂಪಾಜೆ ಘಾಟಿಯ ಅರ್ಧದಾರಿಯಲ್ಲಿ, ನಾಲ್ಕುನಾಡು ಕೊಡಗರ ಒಂದು ಗುಂಪು ಆತನಿಗೆ ಕಾಣಿಸಿತು. ಇವರೆಲ್ಲ ಆತನ ಗುರುತಿನವರೇ ಆಗಿದ್ದರು. ಅವರನ್ನೆಲ್ಲ ವಶಕ್ಕೆ ತೆಗೆದುಕೊಳ್ಳುವಂತೆ ತನ್ನ ಸಂಗಡಿಗರಿಗೆ ಅಪ್ಪಣೆ ಮಾಡಿದನು. ಅವರು ಸಶಸ್ತ್ರರಾಗಿದ್ದು, ಸಂಖ್ಯೆಯಲ್ಲಿ ಹೆಚ್ಚಿದ್ದರೂ ಹೋರಾಡುವ ಧೈರ್ಯ ತೆಗೆದುಕೊಳ್ಳಲಿಲ್ಲ. ಬಂಡಾಯಗಾರರ ಓಡಾಟದ ವಿವರ ತಿಳಿಸಲು ಒಪ್ಪಿಕೊಂಡ ಒಬ್ಬಾತನನ್ನು ಹೊರತುಪಡಿಸಿ ಉಳಿದವರಿಗೆ ಚೆನ್ನಾಗಿ ದಂಡಿಸಲಾಯಿತು ನಾಲ್ಕು ನಾಡಿನ ಸುಭೇದಾರನು ಈ ಬುದ್ಧಿಗೇಡಿ ವ್ಯವಹಾರಕ್ಕೆ ಎಳೆಯಲ್ಪಟ್ಟಿದ್ದನು. ಬೋಪು ಆತನಿಗೆ ಹೇಳಿ ಕಳುಹಿಸಿ ಆತನನ್ನು ಬೇಟೆಯಾಗಿ ಬಂಡಾಯಗಾರರಿಂದ ಅವನನ್ನು ಬೇರ್ಪಡಿಸಲು ಹಾಗೂ ಕಂಪೆನಿ ಸರಕಾರಕ್ಕೆ ನಿಷ್ಠೆಯಿಂದಿರಲು ಒಪ್ಪಿಸುವಂತೆ ತಾಕೀತು ಮಾಡಿದನು. [illegible] ಹೊಡೆತದಿಂದಾಗಿ ಈ ಚಿಲ್ಲರೆ ಬಂಡಾಯಗಾರರು ಕಂಗಾಲಾದರು. ಹೊಡೆತವನ್ನು ಹೊರತುಪಡಿಸಿ, ಒಂದಿಷ್ಟು ರಕ್ತಪಾತವಿಲ್ಲದೆ ಅವರನ್ನು ಹಿಮ್ಮೆಟ್ಟಿಸಿದ ನಂತರ ಕೊಡಗಿನಲ್ಲಿ ಶಾಂತಿ ಸ್ಥಾಪನೆಯಾಯಿತು.

ಕೊಡಗರು ಅವರ ನಿಷ್ಠೆಗಾಗಿ ಸರಕಾರದಿಂದ ಬಹಳ ಪ್ರಶಂಸೆ ಪಡೆದರು. 20,000/– ರೂಪಾಯಿಯ ಖಜಾನೆಯನ್ನು ಪುನರ್‌ವಶಮಾಡಿಕೊಂಡ ಸೇವೆಯ ಸ್ಮರಣಾರ್ಥವಾಗಿ, ಅವರೊಳಗೆ ಹಂಚಿಕೊಳ್ಳಲು ಹೇಳಲಾಯಿತು. ಆದರೆ ಅವರು ಅದಕ್ಕೆ ಬದಲಾಗಿ ಇನ್ನೇನಾದರೂ ಗೌರವ ಕೊಡುವಂತೆ ಬೇಡಿಕೊಂಡರು. ಅವರಿಗೆ ಜಮೀನು ಜಹಗೀರು ಧಾರಾಳವಾಗಿ ಕೊಡಲಾಯಿತು. ಮೂರು ತಲೆಮಾರು ತನಕ ಪಿಂಚಣಿ ನೀಡಲಾಯಿತು. ಅವರವರ ಅರ್ಹತೆಗೆ ಸರಿಯಾಗಿ ಬಟ್ಟೆಬರೆ, ಕುದುರೆ, ಬೆಳ್ಳಿ ಮತ್ತು ಚಿನ್ನದ ಪದಕಗಳನ್ನು ಕೊಡಲಾಯಿತು. ಪ್ರಾಯಶಃ ದಿವಾನರೊಡನೆ ಎಷ್ಟು ಹತ್ತಿರದ ಸ್ನೇಹ ಸಂಬಂಧ ಅವರಿಗೆ ಇದ್ದಿತೆಂಬುದನ್ನು ಇದು ಅನುಸರಿಸಿದ್ದಿರಬೇಕು. "ಕೊಡಗು ಪದಕ"ದ ತೂಕ 7 ತೊಲ, ಜೈನ್ ಸೇರಿದರೆ 11.5 ತೊಲ. ಇದರ ವ್ಯಾಸ ಎರಡು ಇಂಚು. ಒಂದು ಬದಿಯಲ್ಲಿ ಕೊಡಗ ಯೋಧ ಹೋರಾಡುವ ಭಂಗಿಯ ಚಿತ್ರ ಇನ್ನೊಂದು ಬದಿಯಲ್ಲಿ ಉರುಟು ಹೂಮಾಲೆಯೊಳಗೆ ಪೀಚೆಕತ್ತಿ ಮತ್ತು ಒಡಿಕತ್ತಿ ಚಿತ್ರದೊಡನೆ ಇಂಗ್ಲಿಷ್‌ನಲ್ಲಿ "For Distinguished conduct and Loayality to the British Gavernment Coorg April 1837" ಕೊಡಗಿನ ಬ್ರಿಟಿಷ್ ಸರಕಾರಕ್ಕೆ ನಿಷ್ಠೆ ಮತ್ತು ಮೇಲ್ಮಟ್ಟದ ವರ್ತನೆಗೆ ಎಂಬುದಾಗಿ ಇನ್ನೊಂದು ಬದಿಯಲ್ಲಿ ಕನ್ನಡದಲ್ಲಿ ಬರೆಯಲಾಗಿತ್ತು.

1857ರ ಸಿಪಾಯಿ ದಂಗೆಯಲ್ಲಿ ಕೊಡಗರು ಸ್ಥಳೀಯ ಸರಕಾರದ ನಂಬಿಕೆಯನ್ನು ಎಷ್ಟರಮಟ್ಟಿಗೆ ಹೊಂದಿದ್ದರೆಂದರೆ, ದಂಗೆಯನ್ನು ಅಣಗಿಸಿದ ಮೇಲೆ ಚೀಫ್ ಕಮೀಷನರ್ ಆಗಿದ್ದ ಜನರಲ್ ಕಬ್ಬನ್ ಈ ಕೆಳಗಿನ ಇಸ್ತಿವಾರು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಹೊರಡಿಸಿದನು. ಇದರ ಶಿರೋಭಾಗದಲ್ಲಿ ಯೋಧನ ಉಡುಪಿನಲ್ಲಿರುವ ಕೊಡಗನನ್ನು ಪ್ರತಿನಿಧಿಸುವ ಮುದ್ರಿಕೆ ಇದ್ದಿತು.

ಇಸ್ತಿವಾರು

26ನೇ ಫೆಬ್ರವರಿ 1861

ಬ್ರಿಟಿಷ್ ಸರ್ಕಾರಕ್ಕೆ ಉನ್ನತಮಟ್ಟದ ಗೌರವ, ನಿಷ್ಠೆ ಮತ್ತು ಶೌರ್ಯ ಹೊಂದಿರುವ ಸೇನಾನಿಗಳ ಚಿಕ್ಕ ದೇಶವೆಂಬ ವ್ಯಕ್ತಿತ್ವದಿಂದಿರುವ ಮತ್ತು ಸರ್ಕಾರಕ್ಕೆ ನೀಡಿದ ಎದ್ದುಕಾಣುವ ಸೇವೆಗಳನ್ನು ಸ್ಮರಿಸಿಕೊಂಡು, ಭಾರತ ಸರ್ಕಾರ ತನಗಿತ್ತಿರುವ ಅಧಿಕಾರದ ಮೇರೆಗೆ, ಕೊಡಗಿನ ಶೂರ ಜನರಿಗೆ "ಶಸ್ತ್ರ ನಿರ್ಬಂಧ ಕಾನೂನು" ಅನ್ವಯಿಸುವುದಿಲ್ಲವೆಂದು ಪ್ರಕಟಿಸುವುದು ನನ್ನ ಸಂತಸದ ಕರ್ತವ್ಯವಾಗಿದೆ.

ಸಹಿ : ಎಂ. ಕಬ್ಬನ್, ಕಮಿಷನರು

# ಸಕ್ಕರೆ ನಾಡಿನಲ್ಲಿ ಪ್ರೈತಳೆದ ಗೌಡ ಸಮಾಜ

ಮಂಡ್ಯ ಜಿಲ್ಲೆಯ ಸಕ್ಕರೆ ನಗರ ದಲ್ಲೊಂದು ಗೌಡ ಸಂಘಟನೆಯು ಪ್ರಾರಂಭ. ಸಂತೋಷಕೂಟದ ಹೆಸರಿನಲ್ಲಿ 1986 ರಿಂದಲೂ ನಡೆದು ಬರುತ್ತಿರುವ ಕೂಟವಿದು. ಅಲ್ಲಿಂದಿಲ್ಲಿಗೆ ತನ್ನ ಸಂಘಟನೆ ಯನ್ನು ಹುತ್ರಿ ಮತ್ತು ಕೈಲ್ ಪೊಳ್ದ್‌ಗೆ ಮಾತ್ರ ಮೀಸಲಿರಿಸಿ, ತಮ್ಮ ತಮ್ಮಲ್ಲಿಯೇ ವಿಚಾರ ವಿನಿಮಯ ಮಾಡಿಕೊಳ್ಳುವ ಸ್ನೇಹಮಯ ಕೂಟವಾಗಿದೆ. ಮಂಡ್ಯ ಜಿಲ್ಲೆಯಲ್ಲಿರುವ ಸುಮಾರು 200 ಮಂದಿ ಅರೆಭಾಷಿಕರು ಒಂದೆಡೆ ಸೇರಿ ನಕ್ಕು ನಲಿ ಯುವ ಶುಭದಿನ ಇದಾಗಿದೆ. ಇಂದು ಗೌಡ ಸಮಾಜವಾಗಿ ಪರಿವರ್ತಿತವಾದ ಶುಭ ಮುಹೂರ್ತವಾಗಿದೆ.

ದಿನಾಂಕ 3–1–99ರ ಭಾನುವಾರ ಬೆಳಿಗ್ಗೆ 11 ಗಂಟೆಗೆ ಸಭೆ ಪ್ರಾರಂಭ ವಾಯ್ತು. ಸಭೆಯ ಅಧ್ಯಕ್ಷತೆಯನ್ನು ಕೈಬಿಲಿರ ತಿಮ್ಮಯ್ಯನವರು ವಹಿಸಿದ್ದರು. ಮುಖ್ಯ ಅತಿಥಿಯಾಗಿ ಜನಾಂಗದ ಏಕೈಕ ಮುಖವಾಣಿ ಪತ್ರಿಕೆಯಾದ ಕೊಡಗು ಸಂಗಾತಿಯ ಸಂಪಾದಕಿ ಪಟ್ಟಡ ಶೀಲಾಮಣಿ ಮತ್ತು ಗೌರವ ಸಂಪಾದಕ ರಾದ ಪಟ್ಟಡ ಪ್ರಭಾಕರ್‌ರವರು ಆಗಮಿಸಿ ದ್ದರು. ಮೊದಲಿಗೆ ಸ್ವಪರಿಚಯವಾಗಿ, ನಂತರ ಸಮಾರಂಭಕ್ಕೆ ಸ್ವಾಗತ ಬಯಸಿದ ದೆಂಬೆಕೋಡಿ ಚೆಟ್ಟಿಯಪ್ಪನವರು ಸಂತೋಷಕೂಟವು 1986 ರಿಂದಲೇ ನಡೆದು ಬಂದ ವಿಚಾರವನ್ನು ವಿವರಿಸಿದರು. ಅಂದು ಕೂಟ ಸ್ಥಾಪನೆಯಾಗಲು ಪ್ರಮುಖ ಪಾತ್ರ ವಹಿಸಿ ನಂತರ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸಿದ ಪಟ್ಟಡ ಪ್ರಭಾಕರರವರ ಪಾತ್ರವನ್ನು ಪ್ರಶಂಶಿಸಿದರು. ಅಂತೆಯೇ ಸೂಕ್ತ ಸಲಹೆ, ಸೂಚನೆ ಕೊಟ್ಟು ಕೂಟದ ಸ್ಥಾಪನೆಗೆ ಹೆಗ್ಗಂಬವಾಗಿ ದುಡಿದು ಇಂದು ದಿವಂಗತರಾಗಿರುವ ಶ್ರೀ ಕಾಳೇರಮ್ಮನ ಗಣಪತಿಯವರನ್ನು ಪ್ರಶಂಶಿಸುವುದಲ್ಲದೆ 2 ನಿಮಿಷಗಳ ಮೌನ ವ್ರತವನ್ನು ಆಚರಿಸಿ ಶ್ರೀಯುತರ ಆತ್ಮಕ್ಕೆ ಚಿರಶಾಂತಿಯನ್ನು ಕೋರಲಾಯಿತು.

ಸಭೆಯನ್ನುದ್ದೇಶಿಸಿ ಯಾಲದಾಳು ಬಸಪ್ಪನವರು ಮಾತನಾಡುತ್ತಾ, ಸಂಘ ಟನೆಗೆ ಹಣ ಮುಖ್ಯವಲ್ಲ, ಪ್ರಯತ್ನ ಮುಖ್ಯ ಅದಕ್ಕೆ ಇಂದು ಮುಖ್ಯ ಅತಿಥಿ ಯಾಗಿ ಆಗಮಿಸಿದ ಪಟ್ಟಡ ಪ್ರಭಾಕರ ರವರೆ ಸಾಕ್ಷಿ. ಇಂತವರು ಲಕ್ಷಕ್ಕೊಬ್ಬರು. ಇವರನ್ನು ಅತೀ ಸಮೀಪದಿಂದ ಬಲ್ಲೆ. ಧೈರ್ಯ, ಹಟ, ಶ್ರದ್ಧೆ ಮತ್ತು ದೈವ ಬಲ ದಿಂದ ಜನಾಂಗದ ಏಳಿಗೆಗಾಗಿ, ನಮ್ಮತನ, ತನ್ನತನದ ಹೋರಾಟಕ್ಕಾಗಿ ಕೊಡಗು ಸಂಗಾತಿ ಪತ್ರಿಕೆಯನ್ನು ತಂದಿದ್ದಾರೆ. ಇವರ ಈ ಕಾಯಕವೇ ನಮಗೆ ಮಾರ್ಗದರ್ಶನ ವೆಂದರು. ಅವರ ಈ ಸಾಧನೆಯ ನಿಟ್ಟಿನಲ್ಲಿ ನಾವೆಲ್ಲಾ ಪ್ರಯತ್ನಿಸಿದಾಗ ನಮ್ಮ ಜನಾಂಗ ಮುಂದುವರಿಯಲು ಸಾಧ್ಯವೆಂದರು.

ಕೈಬಿಲಿರ ತಿಮ್ಮಯ್ಯನವರು ತಮ್ಮ ಅಧ್ಯಕ್ಷ ಸ್ಥಾನದಿಂದ ಮಾತನಾಡುತ್ತಾ ಮುಂದೆ ಸಮಾಜ ರಚನೆ ಮಾಡಿ ಹಣ ಕ್ರೋಢಿಕರಿಸಿ, ನಿವೇಶನ ಕೊಂಡುಕೊಳ್ಳು ವಲ್ಲಿ ಸಹಕರಿಸಲು ವಿನಂತಿಸಿದರು. ಸಭೆ ಯಲ್ಲಿ ಹಿರಿಯರು, ಪಟ್ಟೆದಾರರು, ಉಪಾ ಧ್ಯಕ್ಷರು ಆದ ಶ್ರೀ ದೇವಜನ ಶಿವಣ್ಣನವರು ಉಪಸ್ಥಿತರಿದ್ದರು. ಹಗಲಿಡೀ ಕ್ರೀಡೆಗಳು, ಮನರಂಜನಾ ಕಾರ್ಯಗಳು ಇದ್ದುವಲ್ಲದೆ ತಾಂಬೋಲ ಆಟವು ಸಹ ಇತ್ತು. ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಮತ್ತು ಮಕ್ಕಳು ಭಾಗವಹಿಸಿದ್ದರು. ಮುಂದಿನ ಸಾಲಿನ ಸಮಿತಿಗೆ ಪಳಂಗೋಟು ಸುರೇಶ್ ಬಾಬು, ಚೋಂಡಿರ ಪೊಣ್ಣಪ್ಪ, ನಂಬು ಡಿರ ಬಸಪ್ಪ, ಪುದಿನೆರವನ ತಮ್ಮಯ್ಯ, ಪರ್ಲಕೋಟಿ ರಾಜು, ಶ್ರೀಮತಿ ಕಾಳೇರಮ್ಮನ ಭಾಗೀರಥಿಯವರು ಅವಿ ರೋಧವಾಗಿ ಆಯ್ಕೆ ಆದರು.

ಕೊನೆಯಲ್ಲಿ ಕಾರ್ಯದರ್ಶಿ ದೇವಜನ ಅನಿಲ್‌ರವರು ಕಾರ್ಯಕ್ರಮದ ಯಶ ಸ್ವಿಗೆ ಸಹಕರಿಸಿದ ಸರ್ವರಿಗೂ ವಂದನೆ ಸಲ್ಲಿಸಿದರು. ●

ವರದಿ : **ದೇವಜನ ಅನಿಲ್ ಶಿವಣ್ಣ**

---

[9ನೇ ಪುಟದಿಂದ]

## ವೀಳ್ಯಶಾಸ್ತ್ರದ ವೀಳ್ಯಗಳು

**ಕೊಡಗಿನಲ್ಲಿ :** 1. ಮಾತಿನ ಕರಾರು ವೀಳ್ಯ, 2. ವೀಳ್ಯ ಶಾಸ್ತ್ರದ ವೀಳ್ಯ, 3. ಮದುವೆ ಕುರಿ ವೀಳ್ಯ, 4. ಬಣ್ಣ ಬಂಗಾರ ವೀಳ್ಯ, 5. ತಂದೆ ಗೋತ್ರ ವೀಳ್ಯ, 6. ತಾಯಿ ಗೋತ್ರ ವೀಳ್ಯ, 7. ಮಹಾನಾಡು ವೀಳ್ಯ.

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ :**

1. ಹೆಣ್ಣು ಮಾತಿನ ವೀಳ್ಯ, 2. ಸಲಾವಳಿ ವೀಳ್ಯ, 3. ಹೆಣ್ಣು ಮಾತಿನ ಕರಾರು ವೀಳ್ಯ, 4. ಲಗ್ನದ ಕುಡಿ ವೀಳ್ಯ, 5. ದೇವರ ವೀಳ್ಯ, 6. ಗುರು ವೀಳ್ಯ, 7. ಭಾಂಧವರ ವೀಳ್ಯ, 8. ತಂದೆ ವೀಳ್ಯ, 9. ತಾಯಿ ವೀಳ್ಯ, 10. ಅಚ್ಚುಕಟ್ಟುವ ವೀಳ್ಯ, 11. ಬಣ್ಣ ಬಂಗಾರ ವೀಳ್ಯ, 12. ತೆರವು ಮರವು ವೀಳ್ಯ. ○

ಕೃಪೆ : **ಕೊಡಗು ಗೌಡ ವಿದ್ಯಾ ಸಂಘ ಮಡಿಕೇರಿ.**

ಟೀಕೆ–ಟಿಪ್ಪಣಿ

## ಮೈಸೂರಿನ ವಿದ್ಯಾಸಂಘದ ದುಸ್ಥಿತಿಯನ್ನು ಕಣ್ಣಾರೆ ಕಂಡು ಮರುಗಿದ ಮಾಜಿ ಮೇಯರ್ ವಾಸು

ದಿನಾಂಕ 30–12–98ರಂದು ಕೊಡಗು ಗೌಡ ವಿದ್ಯಾಸಂಘದಲ್ಲಿ ಒಂದು ಅಪೂರ್ವ ಮಿಲನ. ಈ ಕಾರ್ಯಕ್ರಮವನ್ನು ಮೈಸೂರಿನ ಜಯಲಕ್ಷ್ಮಿಪುರಂ, ಒಂಟಿಕೊಪ್ಪಲು ಹಾಗೂ ಸುತ್ತ ಮುತ್ತ ಇರುವ ಯುವ ಶಕ್ತಿಗಳು ಸೇರಿ ಊಟೋಪಚಾರ ಏರ್ಪಡಿಸಿದ್ದರು. ಈ ಊಟೋಪಚಾರಕ್ಕೆ ಮುಖ್ಯ ಅಥಿತಿಗಳಾಗಿ ಮೈಸೂರಿನ ಮಾಜಿ ಮೇಯರ್, ಮಾಜಿ ಮುಖ್ಯಮಂತ್ರಿ ವೀರಪ್ಪಮೊಯ್ಲಿಯವರ ರಾಜಕೀಯ ಕಾರ್ಯದರ್ಶಿಗಳೂ ಆದ ಶ್ರೀಮಾನ್ ವಾಸುರವರು ಆಗಮಿಸಿದ್ದರು. ಹೀಗೆ ಜೊತೆಗೂಡಿ ಮಾತನಾಡುತ್ತಿರುವ ಸಂದರ್ಭದಲ್ಲಿ ಮಾತು, ಊಟ ಏರ್ಪಡಿಸಿದ್ದ ವಿದ್ಯಾಸಂಘಕ್ಕೆ ಒಕ್ಕರಿಸಿಕೊಂಡಿತು. ಈ ಆಯ್ದ ಯುವ ಶಕ್ತಿಗಳ ಮಿಲನಕ್ಕೆ ನಾನೂ ಒಬ್ಬ ಆಮಂತ್ರಿತನಾಗಿ ವಿದ್ಯಾ ಸಂಘಕ್ಕೆ ತೆರಳಿದ್ದೆನು. ವಾಸುರವರು ನನ್ನನ್ನು ಕುರಿತು ವಿದ್ಯಾಸಂಘದ ಬಗ್ಗೆ ಒಂದೊಂದಾಗಿ ಗತಕಾಲದ ವಿಷಯಗಳನ್ನು ವಿವರಿಸತೊಡಗಿದಲ್ಲದೆ ಆಡಳಿತ ಮಂಡಳಿಯವರ ನಿಷ್ಕ್ರಿಯತೆ ಬಗ್ಗೆ ಮರುಗಿದರು. ನಾನು ಅಂದು ಕಂಡಂತೆ ಇಂದೂ ಸಹ ವಿದ್ಯಾಸಂಘವು ಯಾವ ಬದಲಾವಣೆಯನ್ನು ಕಾಣದೆ ಹಾಗೆಯೇ ಇದೆ. ಏಕೆ ನಿಮ್ಮ ಜನಾಂಗ ಕನಿಷ್ಟ ಕಾಳಜಿ ವಹಿಸದೇ ಹೀಗೆ ಬಿಟ್ಟುಕೊಂಡಿದ್ದಾರೆ? ಜನಾಂಗದವರು ಈಗ ಆರ್ಥಿಕವಾಗಿ ಮುಂದುವರಿದಿದ್ದಾರೆ ಅಲ್ಲವೇ ? ಮನಸ್ಸು ಮಾಡಿದರೆ ಒಬ್ಬೊಬ್ಬರೇ ಸಮಾಜವನ್ನು ಕಟ್ಟಬಹುದಲ್ಲವೇ ? ಆದರೆ ಉದಾರತೆ ಹಾಗೂ ವಿಶಾಲ ಮನೋಭಾವ ಇಲ್ಲದಿರುವುದೇ ಇದಕ್ಕೆ ಕಾರಣವೆಂದು ತಮ್ಮ 40 ವರ್ಷದ ಅನುಭವ [ಅರೆಭಾಷೆ ಗೌಡರೊಂದಿಗೆ]ವನ್ನು ಎಳೆ ಎಳೆಯಾಗಿ ವಿವರಿಸುತ್ತಾ ಹೋದರು.

ಈ ರೀತಿಯ ಮರುಕದ ಮಾತುಗಳನ್ನು ನಾವು ಬೇರೆಯವರಿಂದ ಕೇಳಬೇಕಾಗಿದ್ದು ಅಲ್ಲದೆ, ಇದು ನಮ್ಮ ಜನಾಂಗದಲ್ಲಿ ಅಡಗಿರುವ ಅಭಿಮಾನವನ್ನು ಎತ್ತಿ ತೋರಿಸುತ್ತದೆ. ವಾಸುರವರಿಗೆ ನಮ್ಮ ಸಮಾಜದ ಬಗ್ಗೆ ಇಷ್ಟು ಕಾಳಜಿ ಇರುವಾಗ ನಮ್ಮ ಆಡಳಿತ ಮಂಡಳಿಯವರಿಗೆ [ಕನಿಷ್ಠ ಒಬ್ಬ ಅಥವ ಇಬ್ಬರಿಗಾದರು] ನಮ್ಮ ವಿದ್ಯಾಸಂಘದ ಮೇಲೆ ಕಾಳಜಿ ಬರುವುದಿಲ್ಲವೇಕೆ ? ಇದಕ್ಕೆ ಕಾರಣವೇನೆಂದು ತಿಳಿದರೂ ತಪ್ಪಾಗಬಹುದು. ಇನ್ನು ಮುಂದೆಯಾದರೂ ಕ್ರಿಯಾಶೀಲರಾಗಿ ನಮ್ಮ ಜನಾಂಗದ ಏಳಿಗೆಗೆ, ಸಂಘಟನೆಗೆ, ಸಂಸ್ಕೃತಿ, ಸಂಪ್ರದಾಯ, ಉಡಿಗೆ, ತೊಡಿಗೆಯ, ಆಚಾರ, ವಿಚಾರದ ಪುನರುತ್ಥಾನಕ್ಕೆ ದುಡಿಯುವರೆ ? ನಿರೀಕ್ಷಿಸಬಹುದೇ? ಯಾವಾಗ ? ಸಂಘಟನೆಗೆ ಮುಂದಾದಾಗ.

—ತಡಿಯಪ್ಪನ ಕುಮಾರಜಯ, ಮೈಸೂರು.

## ಶುಭ ವಿವಾಹ

ಕಾರುಗುಂದ ಗ್ರಾಮದ ಮಡಿಕೇರಿ ನಿವಾಸಿ ಬೊಳವಂಡ ಪೆಮ್ಮಯ್ಯ ಇವರ ಪುತ್ರಿ ನವೀನ ಮತ್ತು ಬೆಂಗಳೂರಿನ ಮಚ್ಚಮಾಡ ಬೆಳ್ಯಪ್ಪನವರ ಪುತ್ರ ಸತೀಶ್ ಇವರ ವಿವಾಹವು ದಿನಾಂಕ 3–1–99ರಲ್ಲಿ ಮಡಿಕೇರಿಯ ಮೇಲಿನ ಕೊಡವ ಸಮಾಜದಲ್ಲಿ ನಡೆಯಿತು.

## ಕೊಡಗಿನ ಕಾವೇರಿ

ಸಕಲ ಆಭರಣ ತೊಟ್ಟ ನೀನು ನಿಜವಾಗಿಯೂ ಸುಂದರಿ
ಅಲ್ಲೇನು
ನಿನ್ನ ಚೆಲುವಿಗೆ ಯಾರೂ ಸಾಟಿಯಿಲ್ಲ ಇನ್ನು
ನಿಜವಾಗಿಯೂ ನೀನು ಯಾರೆಂದು ಹೇಳಲೇನು
ನಮ್ಮ ಕರುನಾಡ ಕೊಡಗಿನ ಕಾವೇರಿ ಅಲ್ಲೇನು ?

—ಎಚ್. ಕೆ. ಶ್ರೀಪಾದ್‌ರಾಜ್, ಮೈಸೂರು.

## ಅ[ನ]ರ್ಥ ಪೂರ್ಣ [ವ್ಯಂಗ್ಯ]

ಶಾಸಕ : ಶಾರ್ಕ್ ಮೀನಿನಂತೆ ಸರಕಾರವನ್ನು ಕಬಳಿಸುವವ.

ಮಂತ್ರಿ : ಮಂಗಗಳಂತೆ ತ್ರಿಪಾತ್ರ ಮಾಡುವವ.

ಪ್ರಧಾನಿ : ಪ್ರಜೆಗಳಲ್ಲಿ ದಾಂಧಲೆಯನ್ನು ನಿರ್ಮಿಸುವವ.

ವಿಧಾನ ಸಭೆ : ವಿವಿಧ ಧಾಂದಲೆಯನ್ನು ನಟರಂತೆ ಸಂವೇದಿಸುವ.

—ಅಂಚೆಮನೆ ಸುಧಿ, ಅಭ್ಯತ್‌ಮಂಗಲ

## ನಗೆಹನಿ

ತಾತಾ : "ಏನೋ ಪುಟ್ಟ, ಅಮ್ಮನನ್ನು 'ಮಾಮ್' ಎಂದಷ್ಟೇ ಕರೆಯುತ್ತೀಯ ?"

ಪುಟ್ಟ : "ಅಷ್ಟೇ ಅಲ್ಲ ! ದೊಡ್ಡಮ್ಮ ಮತ್ತು ಚಿಕ್ಕಮ್ಮನನ್ನು ಚಿಕ್ಕದಾಗಿ 'ಮ್ಯಾಕ್ಸಿಮಂ' ಮತ್ತು 'ಮಿನಿಮಂ' ಎಂದೂ ಕರೆಯುತ್ತೇನೆ !"

# ನಿಮ್ಮ ಪತ್ರಗಳು

## ಅಕಾಡೆಮಿ ಅವಶ್ಯ ಚಿಂತಿಸುವುದೆ ?

ಮಾನ್ಯರೇ,

ಆಚೆ ವರ್ಷ ಕೊಡಗಿನಲ್ಲಿ ಗೌಡ ಸಾಂಸ್ಕೃತಿಕ ಅಕಾಡೆಮಿಯು ಕೊಡಗಿನಲ್ಲಿ ರೂಪ ತಾಳಿ ಗೌಡ ಸಂಸ್ಕೃತಿಯನ್ನು ಅಭಿವೃದ್ಧಿ ಪಡಿಸುವ ದೃಷ್ಟಿಯಿಂದ ಗೌಡ ಜನಾಂಗವನ್ನು ಸಂಘಟಿಸಿ ತನ್ಮೂಲಕ ಹಲವು ಕಾರ್ಯಕ್ರಮವನ್ನು ಹಾಕಿಕೊಂಡು ನಶಿಸುತ್ತಿರುವ ಸಂಸ್ಕೃತಿಯನ್ನು ಪುನಶ್ಚೇತನಗೊಳಿಸುವ ಯೋಜನೆಯನ್ನು ಹಾಕಿಕೊಂಡಿದೆ. ಈ ನಿಟ್ಟಿನಲ್ಲಿ ಮೊದಲ ಬಾರಿಗೆ ಗೌಡ ಜನಾಂಗದವರ ಕಲೆ, ಸಂಸ್ಕೃತಿ, ಆಚಾರ, ವಿಚಾರಗಳಿಗೆ ಸಂಬಂಧಿಸಿದ ಸಾಂಸ್ಕೃತಿಕ ಕಾರ್ಯಕ್ರಮವನ್ನು ಹಾಕಿಕೊಂಡು ಗೌಡ ಜನಾಂಗದ ಕಲಾಪ್ರತಿಭೆಗಳಿಂದ ಕಾರ್ಯಕ್ರಮಗಳನ್ನು ಆಹ್ವಾನಿಸಿ ಅದನ್ನು ಪ್ರದರ್ಶಿಸಲು ಅನುವು ಮಾಡಿಕೊಟ್ಟಿತು. ಪ್ರಾರಂಭದಲ್ಲಿ ವೈಯಕ್ತಿಕ ಮತ್ತು ಸ್ವತಂತ್ರವಾದ ತಂಡಗಳು ಪ್ರದರ್ಶನಗಳನ್ನು ನೀಡಿ ಅವರ ಯಶಸ್ಸಿಗೆ ಸಹಕರಿಸಿತು. ತದ ನಂತರ ಆ ತಂಡಗಳು ತಮ್ಮ ಕಾರ್ಯಕ್ರಮವನ್ನು ಅಭಿವೃದ್ಧಿ ಪಡಿಸಿಕೊಂಡು ಸ್ವತಂತ್ರವಾಗಿಯೇ ವಿವಿಧೆಡೆ ತಮ್ಮ ಕಾರ್ಯಕ್ರಮವನ್ನು ಪ್ರದರ್ಶಿಸಿತು ಮತ್ತು ಹಾಗೆಯೇ ಮುಂದುವರಿಯುತ್ತಿದೆ. ಆ ವೇಳೆಯಲ್ಲಿ ಈ ತಂಡಗಳಿಗೆ ಅನೇಕ ಟೀಕೆ-ಟಿಪ್ಪಣಿಗಳು ಬಂದವು. ಅಕಾಡೆಮಿಯಿಂದಲೂ ಬಂದವು. ಆದರೆ ಆ ತಂಡಗಳು ಪಡುತ್ತಿರುವ ಶ್ರಮ, ಅಲ್ಲದೆ ವೆಚ್ಚದ ಬಗ್ಗೆ ಯಾರೂ ತಲೆ ಕೆಡಿಸಿಕೊಳ್ಳಲಿಲ್ಲ. ಪ್ರಾರಂಭದ ನಂತರ ಪ್ರದರ್ಶಿಸಲ್ಪಟ್ಟ ತಂಡಗಳನ್ನು ಗೌಡ ಅಕಾಡೆಮಿಯು ಒಂದೆಡೆ ಕರೆಸಿ ಅವರಿಂದ ಪುನಃ ಪ್ರದರ್ಶನವನ್ನು ಪಡೆದು ಅವುಗಳ ಲೋಪ ದೋಷವನ್ನು ತಿದ್ದಿ ನೂತನ ಬದಲಾವಣೆಯ ಮಾರ್ಗದರ್ಶನವನ್ನು ನೀಡಿ ಸಮಂಜಸವಲ್ಲದ, ಸಂಸ್ಕೃತಿಗೆ ಸೇರದ ಕಾರ್ಯಕ್ರಮವನ್ನು ನಿಲ್ಲಿಸಿ ಸರಿಯಾದ ತಂಡವನ್ನು ಸಂಘಟಿಸಿ ತನ್ಮೂಲಕ ಗೌಡ ಅಕಾಡೆಮಿಯ ಪತಿಯಿಂದಲೇ ಮುಂದೆ ಕಾರ್ಯಕ್ರಮವನ್ನು ಕೊಡುವಂತೆ ಮಾಡಿ ಸಹಾಯ ಸಹಕಾರವನ್ನು ನೀಡಿದ್ದರೆ ಉತ್ತಮವಾಗುತ್ತಿತ್ತು. ಈ ಕಾರ್ಯಕ್ರಮಗಳು ಗೌಡ ಜನಾಂಗವನ್ನೇ ಪ್ರತಿನಿಧಿಸಿ ಹಾಗೂ ಶಾಶ್ವತವಾಗಿ ಮುಂದಿನ ಪೀಳಿಗೆಗೆ ರವಾನಿತವಾಗುವ ಕಾರ್ಯಕ್ರಮವಾದ್ದರಿಂದ ಗೌಡ ಜನಾಂಗದ ಅನುಭವಿಗಳ, ಪಂಡಿತರ, ಹಾಗೂ ಗಣ್ಯರ ಸಮ್ಮುಖದಲ್ಲೇ ರಚನೆಯಾದರೆ ಒಳಿತು. ಮುಂದೆ ಅದನ್ನು ಯಾರೂ ಕಡೆಗಣಿಸುವಂತಾಗಬಾರದು. ಹಾಗೆಯೇ ಈ ಒಂದು ಪ್ರಾರಂಭದ ಸಂಘಟನೆಗೆ ಅಡಿಪಾಯವನ್ನು ಹಾಕಿದ ಸಂಗಾತಿಯನ್ನು, ಸಹಕರಿಸಿದ ಬಳಗದವರನ್ನು, ಕಾರ್ಯಕರ್ತರನ್ನು, ವೈಯಕ್ತಿಕ ಹಾಗೂ ಮನೆತನ ದ್ವೇಶ ಹಾಗೂ ಅಸೂಯೆಯಿಂದ ಅವರನ್ನು ಕಡೆಗಣಿಸುವುದು ತರವಲ್ಲ. ಹಾಗೆಯೇ ಕೆಲವೊಂದು ಕಾರಣದಿಂದ ಪ್ರಾರಂಭದಲ್ಲಿ ಚಟುವಟಿಕೆಯಿಂದ ಕೂಡಿದವರು ಅರ್ಧದಲ್ಲೆ ದೂರ ಸರಿಯುವುದು ಕಾಣುತ್ತಿದೆ. ಈ ರೀತಿಯಾದರೆ ನಾವು ಸಂಘಟಿತರಾಗುವುದು ಕಷ್ಟವೇ. ಅದ್ದರಿಂದ ಮಾನ್ಯ ಗೌಡ ಬಾಂಧವರು ನಾವೆಲ್ಲ ಹತ್ತು ಕುಟುಂಬ ಹದಿನೆಂಟು ಗೋತ್ರದ ಕುಲಬಂಧುಗಳು ಎಂದು ನಮ್ಮ ಯಶಸ್ಸಿಗೆ ಕೈ ಕೈ ಹಿಡಿದು ಸಾಗೋಣ. ಅಕಾಡೆಮಿಯು ಈ ದಿಸೆಯಲ್ಲಿ ದಿಟ್ಟ ಹೆಜ್ಜೆಯನ್ನಿಡಲಿ, ಕುಲ ಗುರು ಶ್ರೀ ವೆಂಕಟರಮಣನ ಅಭಯ ಹಸ್ತವಿರಲಿ ಎಂದು ಹಾರೈಸುವೆ.

—ತೆಕ್ಕಡ ಬಿ. ಕುಮಾರ, ಮುತ್ತಾರ್ಮುಡಿ.

## ಕ ವ ನ ಗ ಳು

ಮುಳುಗುತಿದೆ ಸೂರ್ಯ ಮೋಡಗಳ ಮಧ್ಯದಲಿ
ಕೂಗುತಿದೆ ಕೋಗಿಲೆ ವಸಂತ ಕಾಲದಲಿ
ಮರಳುತಿವೆ ಹಕ್ಕಿಗಳು ತಮ್ಮ ಗೂಡಿರುವಲ್ಲಿ
ಕತ್ತಲು ಕವಿಯಿತು ಬಾನಿನಲಿ ॥

ಆಸೆ ಎಂಬುದು ಸಹಜ ಗುಣ
ಬಯಕೆ ಎಂಬುದು ಹುಟ್ಟು ಗುಣ
ಪ್ರೀತಿ ಎಂಬುದು ತಿಳಿದವನ ಗುಣ
ಅದನ್ನು ಬೆಳೆಸಿಕೊಳ್ಳುವುದು ಮಾನವನ ದೊಡ್ಡ ಗುಣ॥

ಜಾತಿ ಭೇಧಗಳೆಂಬ ಸಂಕೋಲೆಯಲ್ಲಿ
ಬದುಕಲು ಕಷ್ಟವಾಗಿದೆ
ಸ್ನೇಹ-ಪ್ರೀತಿಗಳ ಮಡುವಿನಲಿ
ಜೀವಿಸಲು ಆಸೆಯಾಗಿದೆ ॥

ಮನಸ್ಸೆಂಬ ಜೋಕಾಲಿ ಆಡುತಿದೆ ತೂಗುಯ್ಯಾಲೆ
ಹಾಡುವ ಆಸೆ ಮನದಲಿ ತಾಳೆನು ಕಾತುರ ಎದೆಯಲಿ
ಏನೆಂದು ಅರಿಯೆ ನಾನು ತಾಳಲಾರೆನು ಈ ಸಂತೋಷವನು
ತುಂಬಿದೆ ಕನಸು ಕಣ್ಣಲಿ ನನಸಾಗಿದೆ ಈ ವೇಳೆಯಲಿ ॥

—ಜಿ. ಜಯಶ್ರೀ, ಮಹದೇವಪುರ.

# ಮಾದಪ್ಪಣ್ಣನ ಯಾಲಕ್ಕಿ ದರ್ಬಾರ್

## ಅರೆ ಭಾಷಿಕ ವಿಭಾಗ

ಇದ್ ಮೂವತ್ತ್ ವರ್ಷದ ಹಿಂದೆ ನಡ್ದ ಕತೆ ಪಂಡ್‌ನ ಕಾಲಲಿ ಕಾಕೋಟುಪರಂಬು ಗ್ರಾಮಲಿ ಯಾಲಕ್ಕಿ ಖಂಡಿ ಖಂಡಿ ಬೆಳ್ಸೊವು ಇದ್ದೊ. ಹಂಗೆನೇ ನಮ್ಮ ಎಂಬತೊರ್ಕ್ಲ ಹಿತ್ಲಮನೆ ಮಾದಪ್ಪಣ್ಣಂಗೂ ಖಂಡಿ ಖಂಡಿ ಯಾಲಕ್ಕಿ ಬಾತಿತ್ತ್. ಮಾದಪ್ಪಣ್ಣ ಒಂದೊಂದು ಕೊಯ್ಲಿಗೆ 10–15 ಮಣ ಯಾಲಕ್ಕಿ ಮಡಿಕೇರಿಗೆ ಶುಕ್ರವಾರ ಆಳ್‌ಗಳ ಕೈಲಿ ಹೊರ್ಸಿಕಂಡ್ ತಾಳತ್‌ಮಾನಿಗಾಗಿ ಕುಂದರ್‌ಮೊಟ್ಟೆ ಹತ್ತಿ ಮಡಿಕೇರಿ ಟೋಲ್‌ಗೇಟ್‌ಗೆ ಬಾತಿದ್ದೊ. ಅವ್ಕೆ ಟೋಲ್ ಗೇಟ್‌ಲಿ ಮಮ್ಮದೆ ಕಾಕ ಬಾಳಾ ಬಾಳಾ ಸಿನೇಹ. ಮಮ್ಮದೆ

ಲೇಖಕ : ಪೂಜಾರಿ ಮೊಣ್ಣಪ್ಪ, ಬೆಂಗಳೂರು.

ಕಾಕನ ಕಂಡೇ ಮಾದಪ್ಪಣ್ಣನ ಕೆಲ್ಸ. ಒಂದು ದಿನ ಶುಕ್ರವಾರ ಹೊತ್ತಾರೆ ಎದ್ದ್ ಮಾದಪ್ಪಣ್ಣ ಆಳ್‌ಗಳ್ ಕೈಲಿ ಯಾಲಕ್ಕಿ ಹೊರ್ಸಿಕಂಡ್ ಬಂದ್ ಮಮ್ಮದೆ ಕಾಕನ ಅಂಗಡಿಲಿ ಇಸಿದೊ. ಮಾದಪ್ಪಣ್ಣನ ಕಂಡ್ ಕಾಕಂಗೆ ಬಾಳಾ ಕುಷಿ ಆತ್. ಮಾದಪ್ಪಣ್ಣಂಗೆ 10 ರೂ ನೋಟ್‌ನ ಕೊಟ್ಟ್ ಯಜಮಾನ ನಿಂಜಳ್ ಪೋಯಿಟ್ ಒರ್ 90 ಕಾಟ ಇಟ್ಟಿಟ್ ಬೆರಿ. ನಾನ್ ಇವುಡೆ ಯಾಲಕ್ಕಿ ತೂಕಿಟ್ ಕಣಕ್ ಇಡ್‌ನ್ ತೇಳಿ ದುಡ್ಡ್ ಕೊಟ್ಟತ್. ಮಾದಪ್ಪಣ್ಣ ಕುಷೀಲಿ ಓಂಕಾರೇಶ್ವರ ದೇಸ್ಥಾನದ ಕಡೆ ಇಳಿವ ಕಾಟ [ಶರಾಯಿ] ಶಾಪಿಗೆ ಹೋತ್. ಇತ್ತ ಮಮ್ಮದೆ ಕಾಕ ಒಂದೊಂದು ಚೀಲಂದ ಎರಡೆರಡ್ ಕೈ ತುಂಬಾ ಯಾಲಬಾಚಿ ಬೇರೊಂದು ಗೋಣಿಚೀಲಕ್ಕೆ ಹಾಕಿ ಬ್ಯಾರೆ ಇಸಿತ್. ಮಾದಪ್ಪಣ್ಣ ಬಾಕನ ಮಮ್ಮದೆ ಕಾಕ ಯಾಲಕ್ಕಿನೆಲ್ಲಾ ತೂಕ ಮಾಡಿ ಹತ್ತೂವರೆ ಮಣ ಉಟ್ಟುಂತ್ತೇಳ್ತ್. ಮಾದಪಣ್ಣ ಮನೆಲಿ ತೂಗ್‌ಕಾಕನ 11 ಮಣ ಇತ್ತ್. ಇಲ್ಲಿ ಹತ್ತೂವರೆ ಮಣ ಆತಲೆತ್ತೇಳಿ ಗ್ಯಾನ ಮಾಡ್ತ್. ದುಡ್ಡ್‌ನ ತಕಂಡ್ ಸ್ಪೆನ್ಸರ್ ಹತ್ರ ಹೋಕಾಕನ ಮಾದಪ್ಪಣ್ಣನ ಮೈದುನ ಸಿಕ್ಕಿತ್. ಭಾವನ ಕಂಡ್ ಮಾದಪ್ಪಣ್ಣಂಗೆ ಕುಷಿ ಆತ್. ಮೈದುನ ಕೇಳ್ತ್. ಏನ್‌ಭಾವ ಇಂದ್ ಯಾಲಕ್ಕಿ ತಂದಿದ್ದ ರಾಂತ. ಹೌದು ಅಪ್ಪಣು ಯಾಲಕ್ಕಿ ಮಾರಿ ಆತ್. ಬಾನಾವು ಹಂಞ ಡೋಸ್ ಹಾಕೊನತ್ತೇಳಿ ಗೌಳಿಬೀದಿಕಡೆ ಕರ್‌ಕಂಡ್ ಹೋಗಿ ಅಲ್ಲಿನ ಕಾಟ ಶಾಪ್‌ಗೆ ಹೋಗಿ ಅಲ್ಲಿ ಕುದ್ದ್ ಮಾಸದ ಗೈಪು ಮತ್ತೆ ಎರಡ್ ಪ್ಲೇಟ್ ಕೈಮಾ, ಅರ್ಧ ಕುಪ್ಪಿ ಕಾಟೆಗೆ ಆರ್ಡರ್ ಮಾಡಿ ಭಾವನೂ ಮೈದನನೂ ಪಂಚಾತಿಗೆ ಹಾಕಂಡ್ ಕುಡ್ದೊ. ಅಲ್ಲಿಂದ ಮಾರ್ಕೆಟೆಗೆ ಹೋಕುತ ಬಸ್‌ಸ್ಟ್ಯಾಂಡ್‌ಗೆ ಇಳ್ದ್ ಇನ್ನೇನ್ ಮಾರ್ಕೆಟೆಗೆ ಹೋಕುತ ಚೌಕಿಗೆ ಹೋಕಾಕನ ಅಲ್ಲಿ ಮಾದಪ್ಪಣ್ಣನ ಸೋದರಮಾವ ಕಡ್ಲೆಮಕ್ಕಿ ಮಾಚಯ್ಯ ಮಾವ ಸಿಕ್ಕಿದೊ. ಮಾಚಯ್ಯ ಮಾವತ್ತೇಳ್ರೆ ಮಾದಪ್ಪಣ್ಣಂಗೆ ಬಾಳಾ ಪಿಂತಿ. ಅದೂ ಅಲ್ಲದೆ ಅಪರೂಪಕ್ಕೆ ಸಿಕ್ಕಿದ ಮಾವ. ಮಾವನ ಕಂಡ್ ಅಲ್ಲೇ ಇದ್ದ ನಾರಾಯಣ ಶೆಟ್ಟಿ ಮಿಲ್ಟ್ರಿ ಹೊಟೇಲಿಗೆ ಕರ್‌ಕಂಡ್ ಅಲ್ಲೇ ಇದ್ದ ನಾರಾಯಣಶೆಟ್ಟಿ ಮಿಲ್ಟ್ರಿ ಹೊಟೇಲಿಗೆ ಕರ್‌ಕಂಡ್ ಹೋತ್. ಹೋಗಿ ಮಾಡಿಗೆ ಹತ್ತಿ ಅರ್ಧ ಕಾಟೆಗೆ ಹೊಟ್ಲ ಹೈದನ ಕೈಲಿ ದುಡ್ಡ್ ಕೊಟ್ಟ್‌ಕಳ್ಸಿ ತರ್ಸಿ ಕುಡಿತಾ ಮಾಸಗೈಪ್, ಬಿರಿಯಾನಿ ತರ್ಸಿ ಕುಡಿತಾ ಕುಡಿತಾ ಊಟ ಮಾಡ್ದೊ. ಊಟ ಆಗಿ ಆಕನ ಮಾದಪ್ಪಣ್ಣಂಗೆ ಕುದ್ದಲ್ಲಿಂದ ಏಳಿಕೆ ಆತ್‌ಲೆ. ಕಾರಣ ಟೋಲ್‌ಗೇಟ್‌ಂದ ಇಲ್ಲಿ ತನಕ ಒಂದು ಕುಪ್ಪಿಯುಸ್ಟ್ ಕಾಟ ಮಾದಪ್ಪಣ್ಣನ ಹೊಟ್ಟೆಗೆ ಸೇರಿಟ್ಟ್ ಆ ಕಾಟ ಮಾದಪ್ಪಣ್ಣನ ಏಳಿಕೆ ಬುಡ್ದಲೆ ಇವರ ಕಷ್ಟನ ನೋಡಿ ನಾರಾಯಣಶೆಟ್ಟಿ ಒಂದ್ ಕಾರ್‌ನ ಬಾಡಿಗೆಗೆ ಮಾಡಿ ಮಾಚಯ್ಯ ಮಾವನ ಸೇರಿಸಿ ಮನೆಗೆ ಕಳುಹಿಸಿದೊ. ಮಾದಪ್ಪಣ್ಣ ದಾರಿಲೆಲ್ಲಾ ಕಾರಿ ಕಾರಿ ಅವರ ಮನೆ ಉಬ್ಬಲು ಹತ್ರ ಹೋಕಾಕನ ಸೊಯೇ ಇಲ್ಲೆ. ಮಾಚಯ್ಯ ಮಾವ ಕಷ್ಟ ಪಟ್ಟ್ ಕಾರ್‌ಂದ ಇಳ್ದ್ ಮನೆವರ ಕರ್ತ್. ಮಾದಪ್ಪಣ್ಣನ ಹೆಣ್ಣ್ ಸೀತಮ್ಮಕ್ಕ, ಮಗ್ಳು ಚೋಂದಮ್ಮ, ಮಜ ದೇವಯ್ಯ ಮಾದಪ್ಪಣ್ಣನ ಅವ್ವ ತಂಗಮ್ಮ ಚಾಮೆವ್ವ, ಮಾದಪ್ಪಣ್ಣನ ಅಪ್ಪ ಸುಬ್ರಾಯ ಚಾಂಪ ಮನೆಮಕ್ಕ ಮರಿ ಎಲ್ಲಾ ಬಂದೊ. ಬಂದ್ ನೋಡಿ ಮಾದಪ್ಪಣ್ಣ ಕಮುಚಿ ಕಾರ್‌ನ ಸೀಟ್ ಮೇಲೆ ಬಿದ್ದುಟು ಮನೆವುಕೆಲ್ಲಾ ಮಾದಪ್ಪಣ್ಣ ಸತ್ತೇ ಹೋವುಟುತ ಅಂದಾಜಿ ಮಾದಪ್ಪಣ್ಣನ ಕುರ್ಚಿಲಿ ಕೂರಿಸಿ ಮನೆಗೆ ಕರ್ಕೊಂಡೋದೊ. ಮಾದಪ್ಪಣ್ಣನ ಜೀವ ಹೋಗಿಟುತ್ತೇಳಿ ಮನೆವೆಲ್ಲಾ ಮರ್‌ಡಿಕೆ ಸುರುಮಾಡ್ದೊ. ಆಗ ಮಾಚಯ್ಯ ಮಾವ ಮರ್‌ಡ್‌ಬಡಿ ಮಾದಪ್ಪ ಸತ್ತ್‌ಲ್ಲೆ, ಅವನ ತಲೆಗೆ ನಿಂಬೆ ಹಣ್ಣ್‌ನ ರಸ ಉಜ್ಜಿ ಸ್ವಲ್ಪ ಮಜ್ಜಿಗೆ ಕುಡ್ಸಿ ಮತ್ತೆ ಎಲ್ಲಾ ಕತೆ ಹೇಳ್ನಿತ ಹೇಳಿ ಅವು ಹೇಳ್ದಂಗೆ ಮಾಡಿ ಆದಮೇಲೆ ನಡ್ದ ಕತೆನ ಹೇಳ್ತ್.

[18ನೇ ಪುಟ ನೋಡಿ]

## ಧಾರವಾಹಿ–19

ಮೂಲಕಥೆ : ಅಶ್ವಥಿ ಅರವಿಂದ್

ಅರೆಭಾಷೆಗೆ : ಎಂ. ಇ. ಮುಹಮ್ಮದ್

# ಕರಿ ಚಿನ್ನ

ರಂಜನ್ ಬೇರೆ ಒಂದ್ ಗೂಡೆನ ಬಲೆ ಬೀಳ್ಸಿಕೆ ಪೇಚಾಡ್ತಾ ಇತ್ತ್. ಅದ್ ಬೇರೆ ಯಾರೂ ಅಲ್ಲ, ಚಂಗುಮಣಿನ ತಂಗೆ ನೀಲು. ಪಾಪ ಚಂಗುಮಣಿಗೆ ಅದೆಲ್ಲಾ ಹೆಂಗೆ ಗೊತ್ತಾಕು?

ನೀಲುನ ಕಂಡ್ ಆಕನ ರಂಜನ್‌ಗೆ ಬೇಟೆ ಮರ್‍ತೇ ಹೋತ್. ಗಾಳಿಮರ ಸೋಮಯ್ಯ ಕೊಟ್ಬೂರ್‌ಲಿ ಮದ್ವೆಗೆ ಹೋಗುಟ್ಟುಗಡ. ಒಮ್ಮೆ ಅವಳ ಮನೆಕಡೆ ಹೋಗಿ ಬಂದರೆ ಹೆಂಗೆ. ರಂಜನ್ ಗ್ಯಾನ ಮಾಡ್ತ್.

ಅವುಳು ಒಪ್ಪಿಕಂಡರೆ ಛಾನ್ಸ್. ಇಲ್ಲದೆ ಹೋದರೆ ಒಂದ್ ಗ್ಲಾಸ್ ನೀರ್ ಕೇಳಿ ಕುಡ್ದ್ ಬಾದು. ಬೇಟೆನ ಅರ್ಧಕ್ಕೆ ಬುಟ್ಟ್ ಅಂವ ನೀಲುನ ಮನೆಗೆ ಹೋಕೆ ಜೀಪ್ ಹತ್ತಿತ್.

ಜೀಪ್ ಎಂಬತ್ತ್ ಕಿ.ಮೀ. ಸ್ಪೀಡ್‌ಲಿ ಓಡ್ತ್. ಗಾಳಿ ಮರ ಸೋಮಯ್ಯನ ಮನೆ ಹತ್ರ ಜೀಪ್ ನಿಲ್ಸಿಬುಟ್ಟ್ ಅಂವ ಇಳ್ದ್ ನಡ್ತ್.

ಯಾರೂ ಕಾಣದಂಗೆ ಅಂವ ನೀಲುನ ಅಡಿಗೆ ಮನೆಗೆ ಹೋತ್.

'ನೀಲು, ಪಪ್ಪ ಬಾತ್ಲೆಯಾ ?'

ಅಂವ ಕೊತ್ತಿನಂಗೆ ಸಣ್ಣ ಸ್ವರಲಿ ಕೇಳ್ತ್.

'ಪಪ್ಪ ಬಾಕನ ಮೂರ್ ಮೂರ್‌ವರೆ ಆದು' ನೀಲು ಹೇಳ್ತ್.

'ಅಬ್ಬಾ ಎಂತಾ ಸೆಕೆ. ಒಂದ್ ಗ್ಲಾಸ್ ನೀರ್ ಕೊಟ್ಟೆಯಾ ?'

ಹ್ಞಾಂತ ಹೇಳಿಕಂಡ್ ನೀಲು ಒಳಗೆ ಹೋತ್. ಅವುಳು ಸೆಲ್ಪ್‌ಲಿ ಇದ್ದ ಸ್ಟೀಲ್ ಗ್ಲಾಸ್‌ಗೆ ಕೈ ಹಾಕ್‌ಕಾಕನ ರಂಜನ್ ಹಿಂದೆಂದ ಹೋಗಿ ಅಡಿಗೆ ಮನೆದ್ ಬಾಗ್ಲ್ ಹಾಕಿ ಬೋಲ್ಟ್ ಹಾಕಿತ್.

ನೀಲು ಹೆದ್ರಿ ತಿರುಗಿ ನೋಡ್‌ಕಾಕನ ರಂಜನ್ ಅವುಳ್ನ ತಬ್ಬಿ ಹಿಡ್ತ್.

'ಅಯ್ಯೋ...ನನ್ನ ಬುಡು, ಬುಟ್ಟ್‌ಬುಡೂ...' ನೀಲು ತಪ್ಸಿಕಣಿಕೆ ಪೇಚಾಡ್ತ್.

'ಈ ಬೋರ್‌ಗುಡ್ಡೆ ದೇವಯ್ಯನ ಮಂಙ ರಂಜನ್ ಇಲ್ಲಿ ವರೆಗೆ ಕೈಗೆ ಸಿಕ್ಕವರ್ನ ಬುಟ್ಟವನೇ ಅಲ್ಲನೆ ಗೂಡೆ.'

ನೀಲು ರೋಷಲಿ ಅವನ ಕೈಗೆ ಕಚ್ಚಿತ್, ಸಿಕ್ಕಿ ಸಿಕ್ಕಿದಲ್ಲಿ ಗೆಲ್ಲ ಉಗ್‌ರ್‌ಂದ ಪರ್‍ಚಿತ್.

ಅಂವ ಕಾಲ್‌ಕೊಟ್ಟ್ ಅವುಳ್ನ ಮೊಗುಚಿ ಹಾಕಿತ್. ಕೈ ಹಾಕಿ ಆತ್ ಇನ್ನ್ ಬುಟ್ಟರೆ ಆದುಲೆ.

ನೀಲು ಜೀವದ ಆಸೆ ಬುಟ್ಟ್ ಮಾನ ಬಚಾವ್ ಮಾಡಿ ಕಣಿಕೆ ಪೇಚಾಡ್ತ್. ಅಂವನ ಮುಸುಡಿಗೆ ಪರ್‍ಚಿ ಹೊಡ್ತ್. ಅಪ್ಪಲ್ರ್ ಅವಳ ಮೇಲೆ ಕುದ್ದ ರಂಜನ್, ನೀಲುನ ಎರಡೂ ಕೈನ ಗಟ್ಟೆ ಹಿಡ್ತ್. ತನ್ನ ಹಣೆಲಿ ಅವಳ ಮೊಕಕ್ಕೆ ಒಂದ್ ಗುದ್ದ್ ಕೊಟ್ಟ್ ಹಲ್ಲ್ ಕಚ್ಚಿಕಂಡ್ ಹೇಳ್ತ್.

'ನಿನ್ನ ಕೊಂದ್‌ಬುಟ್ಟನೆ, ಸುಮ್ನೆ ಬಿದ್ದ್‌ಕ'

'ಅಯ್ಯೋ ಪಪ್ಪಾ...ಯಾರಾದರ್ ನನ್ನ ಬಚಾವ್ ಮಾಡಿ ಅಮ್ಮಾ...'

ಅವುಳು ಸತ್ತ್‌ಹೋದ ಅವಳ ಅವ್ವನ ಸನ ಕರ್ತ್.

ಅಪ್ಪಲ್ರ್ ಚಂಗುಮಣಿ ತನ್ನ ಮನೆ ಅಂಗಳಕೆ ತಲಪಿತ್.

'ಪಪ್ಪಾ...ಅಮ್ಮಾ...ಅಣ್ಣಯಾ ನನ್ನ ಬಚಾವ್ ಮಾಡಿ

ತಂಗಿ ನೀಲುನ ಮರ್ನಟ ಚಂಗುಮಣಿನ ಕಿಮಿಗೆ ಬೀತ್.

ಎದ್‌ರ್‌ಗಡೆ ಬಾಗ್ಲ್ ಒಂದ್ ಒತ್ತ್‌ಕೆ ಬೀಳ್ಸಿದ ಚಂಗು ಮಣಿ ಒಳಗೆ ನುಗ್ಗಿತ್. ಸೊಂಟ್‌ಲಿ ಸಿಕ್ಸಿದ್ದ ಚಾಕ್‌ನ ತೆಗ್ದ್ ಕೈಲಿ ಹಿಡ್‌ಕಂಡತ್. ಅಂವನೂ ಒಳಗೆ ಅಡಿಗೆ ಮನೆಗೆ ಹೋತ್. ಅಲ್ಲಿದ್ ದೃಶ್ಯ ನೋಡಿ ಅವನ ರಕ್ತ ಕೊದ್ದತ್.

ತನ್ನ ಪ್ರೀತಿಯ ತಂಗೆದ್ ಎದೆ ಮೇಲೆ ಮೊಕಡೆ ಮಲಗಿದ್ದ ರಂಜನ್‌ನ ಬೆನ್ನಿಗೆ ಚಂಗುಮಣಿ ಕೈಲಿದ್ದ ಹರ್‍ತ್ತದ ಚಾಕ್‌ಂದ ಬಲವಾಗಿ ಚುಚ್ಚಿತ್.

'ಅಯ್ಯೋ ಹ್ಞಾ೯೯೯೦'

ಜೋರಾಗಿ ಕಿರ್‍ಚಿಕಂಡ್ ರಂಜನ್ ಮೊಗುಚಿ ಬಿದ್ದ್

---

ಕಳ್ದ ಸಂಚಿಕೆಲಿ...............

ರಂಜನ್ ಮಲೆಗೆ ಹೊರಟಂವ ಚಂಗುಮಣಿನ ತಂಗೆ ನೀಲುನ ಕಂಡ್ ಬಾಯಿ ನೀರ್ ಸುರ್ಸಿದೆ. ಅವಳ್ನ ಹೆಂಗಾರ್ ಮಾಡಿ ಮಜಾ ಮಾಡೋಕುತ ಗ್ಯಾನ ಮಾಡಿಕಂಡ್ ಇದ್ದದೆ. ಇತ್ತ ಚಂಗುಮಣಿ ಜೈಲ್‌ಂದ ಬಿಡ್‌ಗಡೆ ಆದ್ ರಂಜನ್‌ಗೆ ಗೊತ್ಲೆ. ಚಂಗುಮಣಿ ಜೈಲ್‌ಂದ ಬಂದ್ ಖಾದರ್‌ನ ಅಂಗಡಿಂದ್ ಪಕೋಡ ತಕಂಡ್, ಸೀನನತ್ರ ಕಳ್ಳ್ ಕುಡ್ದ್ ಸೀದ ಮನೆಗೆ ಬಂದದೆ.

ಮುಂದೆ ಓದಿ...............

ಒದ್ವಾಡ್ತ್. ಆ ಹಣವಂತನ ಬೆನ್ನ್‌ಂದ ರಕ್ತದ ಓಕುಳಿ ಹರ್ತ್. ನೀಲು ತನ್ನ ಕಾಪಾಡ್‌ದಂವ ಯಾರ್‌ಂತ ತಿರ್‍ಗಿನೋಡ್ತ್

ಅವಳ ಕಣ್ಣ್‌ಲಿ ನೀರ್ ತುಂಬಿತ್.

ಅಣ್ಣಯ್ಯ...!

ನಡ್‌ಗ್ತಾ ಇದ್ದ ಅವಳ ತುಟಿ ಆಶ್ಚರ್ಯಲಿ ಹೇಳ್ತ್.

ಚಂಗುಮಣಿ 'ಹ್ಞಾಂ'ಂತ ಅಷ್ಟೇ ಹೇಳ್ತ್. ಅವನ ನೋಟ ಎಲ್ಲಾ ರಂಜನ್‌ನ ಮೇಲೆ ಇತ್ತ್.

ರಂಜನ್‌ನ ಉಸ್‌ರ್ ನಿತ್ತ್ ಹೋತ್. ಚಂಗುಮಣಿ ರಂಜನ್‌ನ ಬೆನ್ನ್‌ಂದ ಚಾಕ್‌ನ ಎಳ್ದ್ ಮೊಡ್‌ಚಿ ಬುಟ್ಟ್ ತನ್ನ ಸೊಂಟಕೆ ಸಿಕ್ಸಿಕಂಡತ್.

ರಂಜನ್‌ನ ಹೆಣನ ನೋಡಿಕೆ ನೀಲುಗೆ ಧೈರ್ಯ ಸಾಲ್ದೇ ಹೋತ್. ಅವುಳಿಗೆ ಶಕ್ತಿ ಕೂಡ ಇತ್ತ್‌ಲೆ. ತನ್ನ ಅಣ್ಣಯ್ಯ ಎರಡ್‌ನೇ ಸಲ ಒಂದ್ ಕೊಲೆಗಾರ ಆಗಿದ್ದನ್ನ ಅವಳಿಗೆ ಸಹಿಸಿಕೆ ಆಗದೇ ಹೋತ್.

ಹರ್ದ ರಕ್ತದ ಬಿಸಿ ಆರಿಕೆ ಮೊದ್ಲೆ ನೀಲು ಪಕ್ಕದ ರೂಂಗೆ ಹೋತ್. ಹಾಸಿಗೆಲಿ ಬಿದ್ದ್‌ಕಂಡ್ ಮರ್ಡಿಕೆ ಸುರ್ ಮಾಡ್ತ್. ಚಂಗುಮಣಿ ಅವುಳ್ನ ಸಮಾಧಾನ ಮಾಡ್ತ್.

ಮರ್ಡ್‌ಬಡ ನೀಲು, ನೀನ್ ಯಾಗೋಳು ನಗಾಡ್ತಾ ಇರೋಕು. ನಮ್ಮಂತ ಪಾಪದವರ ಎಷ್ಟೋ ಗೂಡೆಗಳ್ನ ಹಾಳ್ ಮಾಡ್‌ದಂವ ಆ ಪಾಪಿ ಸೊಳೆ ಮಜ, ಇನ್ನೊಮ್ಮೆ ಜೈಲ್‌ಂದ ನಾನ್ ಬುಡ್‌ಗಡೆ ಆಗಿ ಬಂದರೆ ಸಾಯೋವರ್‍ಗೂ ಒಂದು ತಪ್ಪುನ ಸಹ ಮಾಡ್ದುಲೆ.

ಏಳ್ ನೀಲು ಮರ್ಡ್‌ಬಡ'

'ಇಬ್ಬರ್ನ ಕೊಂದ ನಿಂಗೆ ಪಾಸಿ ಆದುಲೆ ಅಣ್ಣಯ್ಯ ? ನಿಂಗೆ ಅಂತಾ ಒಂದ್ ಶಿಕ್ಷೆ ಸಿಕ್ಕಿಬುಟ್ರೆ ನಾನ್ ಮಾತ್ರ ಖಂಡಿತಾ ಬದ್‌ಕಿ ಇರ್ದುಲೆ.'

ಅವುಳು ಹೇಳ್ಕಂಡ್ ಪುನಃ ಮರ್ಡಿಕೆ ಸುರ್ ಮಾಡ್ತ್.

'ನಂಗೆ ಒಂದೂ ಗೊತ್ಲೆ ನೀಲು, ಪಾಸಿಗೆ ಕೊಟ್ಟರೆ ಕುಸಿಲೇ ಕುತ್ತಿಗೆ ಕೊಟ್ಟನೆ. ನಾನ್ ಇಬ್ಬರ್ನ ಕೊಂದದಕೆ ತಾನೆ ನನ್ನ ಜೀಂವ ತೆಗೆಯೋದು. ಆದರೆ ದೇವುರಿಗೆ ಗೊತ್ತುಟ್ಟು ಈ ಸರ್ತಿ ನಾನ್ ತಪ್ಪಿತಸ್ಥ ಅಲ್ಲಾಂತ. ನೀನ್ ಕಣ್ಣ್ ಒರ್ಸಿಕಂಡ್ ಹೊರಗೆ ಹೋಗು. ನಾನ್ ಸೀದ ಸ್ಟೇಶನ್‌ಗೆ ಹೋನೆ. ಅಡ್‌ಂಗಿ ಕುದ್ದರೆ ಆದುಲೆ. ಬೋರ್‌ಗುಡ್ಡೆ ದೇವಯ್ಯ ದೊಡ್ಡ ಹಣ

[20ನೇ ಪುಟ ನೋಡಿ]

[16ನೇ ಪುಟದಿಂದ]

**ಮಾದಪ್ಪಣ್ಣನ ಯಾಲಕ್ಕಿ ದರ್ಬಾರ್**

ಮಾದಪ್ಪಣ್ಣಂಗೆ ರಾತ್ರೆ 12 ಗಂಟೆಗೆ ಎಚ್ಚರಿಕೆ ಆತ್. ಸೀತಮುಕ್ಕ ಕೇಳ್ತ್. ಸಂತೆ ಸಾಮಾನ್ ಎಲ್ಲಿತ ? ಮಾರ್ಕೆಟಿಗೆ ಹೋದರೆ ತಾನೆ ಸಾಮಾನ್ ತಾದು ? ಅದ್ಕೆ ಸೀತಮ್ಮಕ ಹೇಳ್ತ್ ಕುಡಿಯುಕೆ ಒಂದು ಮಿತಿ ಬೇಕ್. ಕುತ್ತಿಗೆ ಮಟ್ಟ ಹಿಗ್ಗ್ಗುದ್ಯಾಕೆ. ಮದುವೆ ಆವ ಗೂಡೆನ ಮನೆಲಿ ಇಸಿಕಂಡ್ ಹಣ ಸಿಕ್ತ್ತ ಹಿಂಗೆ ಕುಡ್ದರೆ ಹಿಂಗೆ ಕಳ್ಳ್ ಕುಡಿವವರ ಮಗ್ಳನ ಯಾರ್ ತಕೊಂಡೋದವೆ. ಮಜ ಹೈಸ್ಕೂಲ್ ಮಾಸ್ಟ್ರ್. ಅವನ ಹೆಸರ್ ಹಾಳಾದುಲೆ ? ಇವ್ ಎಲ್ಲಾವರ್ ಬೇರೆವುಕೆ ಗೊತ್ತಾಗಿದ್ದರೆ ನಮ್ಮ ಎಲ್ಲವರ ಮರ್ಯಾದೆ ಹೊತಿತ್ತ್. ಪಾಪ ಮಾಚಯ್ಯ ಸಣ್ಣಪ್ಪ ನಿಮ್ಮೊಟ್ಟಿಗೆ ಇದ್ದರ್‌ಂದ ಯಾಲಕ್ಕಿ ಮಾರ್ದ ದುಡ್ಡ್‌ನೂ ನಮಗೆ ಸಿಕ್ಕಿತ್. ನಾವೆಲ್ಲಾ ಕಷ್ಟ ಪಟ್ಟ್ ದುಡಿಯೋದು. ನೀವು ಹಿಂಗೆ ಕುಡ್ದ್ ಹಾಳ್ ಮಾಡ್ರೆ ನಮ್ಮ ಗತಿ ಏನಾಕುಂತೇಳಿ ಬೊಯ್ಯಕಾಕನ ಮನೆವೆಲ್ಲಾ ಅಟ್ಟಕ್ಕೆ ಹತ್ತಿ ಮಾದಪ್ಪಣ್ಣನ ಹಕ್ಕಲೆ ಬಂದೊ. ಒಬ್ಬೊಬ್ಬ ಒಂದೊಂದು ಹೇಳ್ ಕಾಕನ ಮಾದಪ್ಪಣ್ಣಂಗೆ ಸಾಕ್ ಸಾಕಾಗಿ ಹೋತ್. ಅದ್‌ಂದ ಸೀತಮ್ಮಕ್ಕನೂ ಮಾದಪಣ್ಣನೊಟ್ಟಿಗೆ ಮಡಿಕೇರಿಗೆ ಹೋಗಿ ಒಳ್ಳೊಳ್ಳೆ ವ್ಯಾಪಾರಿಗಳ ಹತ್ರ ಯಾಲಕ್ಕಿ ಮಾರಾಟ ಮಾಡಿ, ಸೀತಮ್ಮಕ್ಕನೇ ಬ್ರಾಂಡಿ ಶಾಪ್‌ಗೆ ಹೋಗಿ ಗಂಡಂಗೆತ ಬ್ರಾಂಡಿ ತಂದ್ ಸಾಯಂಕಾಲ ಸ್ವಪ್ಪ ಸ್ವಲ್ಪ ಕೊಡಿಕೆ ಶುರುಮಾಡಿ ಮಾದಪ್ಪಣ್ಣನ ಸಂಸಾರ ಲಾಯಿಕ್ ಆತ್. ಮಗಳಿಗೂ ಒಳ್ಳೇ ಕಡೆ ಮದುವೆ ಆತ್. ಎಲ್ಲವೂ ಈಗ ಲಾಯಿಕ ಒಳೊ–ಅಂತೂ ಹೆಂಗುಟ್ಟ್ ಯಾಲಕ್ಕಿ ದರ್ಬಾರ್ ? ●

## ನಗೆ ಹನಿಗ

ಒಂದು ಹೈದ ಅವನ ಚೆಡ್ಡಿ ಫ್ರೆಂಡ್‌ಗೆ ಹೇಳ್ತ್.

ಒಂದು ಹೈದ : ಅಲ್ಲರಾ ನಾವೆಲ್ಲ ಭಾರತಲಿ ಹುಟ್ಟ್ಟದಕ್ಕಿಂತ ಶ್ರೀಲಂಕಲಿ ಹುಟ್ಟಿದ್ದರೆ ಲಾಯ್ಕ ಇತ್ತ್‌ಲ ಮರಾಯಾ.

ಇನ್ನೊಂದು ಹೈದ : ಯಾಕೆರಾ ?

ಒಂದು ಹೈದ : ಅಲ್ಲರ ನಮಿಗೆಲ್ಲ ಭಾರತ ಬುಡ್ಸಿಕೆ ಕಷ್ಟ ಅಲಾ. ಶ್ರೀಲಂಕಾನ ಸುಲ್ ಬಲಿ ಬುಡ್ಸರ್ ಅದ್ಕೆ.

—ಊರೋಳನ ತುಳಸಿ ಸುಬ್ಬಯ್ಯ
ಅಸಂದೂರು.

# ಸಾಮರಸ್ಯಕ್ಕಾಗಿ ಒಂದು ಚಿಂತನೆ

ಎನ್. ಎಸ್. ದೇವಿಪ್ರಸಾದ್, ಸಂಪಾಜೆ.

ಮೈಸೂರಿನಲ್ಲಿ ಬ್ರಿಟೀಷರೊಡನೆ ಸಂಘರ್ಷ ಆಗುತ್ತಿದ್ದಾಗ ಕೆಲವು ಜನರು ಬ್ರಿಟೀಷರ ಪರ ವಹಿಸಿದರು. ಅಂದಿನ ಪರಿಸ್ಥಿತಿಯಲ್ಲಿ ಯಾರ್‍ಯಾರು ಯಾಕಾಗಿ ಹಾಗಾಯಿತು. ಟಿಪ್ಪುವಿನ ಪರ ವಹಿಸಿದವರದ್ದು ಸರಿಯೋ ತಪ್ಪೋ ಇಲ್ಲಿ ವಿಮರ್ಶಿಸುವುದಿಲ್ಲ.

1792ರ ಮೈಸೂರು ಒಪ್ಪಂದದಲ್ಲಿ ಬ್ರಿಟೀಷರು ಕೊಡಗನ್ನು ಬಿಟ್ಟುಕೊಡಬೇಕೆಂದು ಬಲತ್ಕರಿಸಿದಾಗ ಮಕ್ಕಳನ್ನು ಒತ್ತೆ ಇಟ್ಟ ಟಿಪ್ಪುಸುಲ್ತಾನ ಇದಕ್ಕೆ ಒಪ್ಪಲೇಬೇಕಾಯ್ತು. ಅದೇ ವರ್ಷ ಬ್ರಿಟೀಷರು ವಿರಾಜಪೇಟೆಯನ್ನು ಕಟ್ಟಿದರು. ಮರುವರ್ಷ ಒಬ್ಬ ವೀರರಾಜೇಂದ್ರನೆಂಬುದಾಗಿ ಸ್ಥಾಪಿಸಿ, ಅವನೊಡನೆ ಒಪ್ಪಂದ ಕರಾರು ಮಾಡಿಕೊಂಡು ಚರಿತ್ರೆಯಲ್ಲಿ ದಾಖಲಿಸಿದರು. ಮತ್ತೆ ಮೂರು ವರ್ಷಗಳ ನಂತರ ನಾಕುನಾಡು ಅರಮನೆ ಕಟ್ಟಿ, ಆತನಿಗೆ ಪಟ್ಟಾಭಿಷೇಕ ಆಯಿತು. ಅಲ್ಲಿ ಆತನ ಮುಂದಾಳುತನದಲ್ಲಿ ತಮ್ಮ ಬೆಂಬಲಿಗರನ್ನು ಒಟ್ಟು ಸೇರಿಸಿದರು. ಇಂತಹವರ ಸಂತತಿಯನ್ನು ಇಲ್ಲಿ ಬೆಳೆಸಿ ದೊಡ್ಡ ದೊಡ್ಡ ಪದವಿ, ಅಧಿಕಾರ ಸ್ಥಾನಕ್ಕೆ ತಯಾರು ಗೊಳಿಸಿದರು. ತಮ್ಮ ಆಪ್ತ ಆರಾಧಕರನ್ನು ತಂದು ವಿರಾಜಪೇಟೆಯಲ್ಲಿಟ್ಟು ಬೆಳೆಸುವ ಅಭಿಪ್ರಾಯ ಕಾರ್ಯಗತ ಮಾಡುವುದು ಬ್ರಿಟೀಷರಿಗೆ ಸಾಧ್ಯವಾಯಿತು.

ಆದರೆ ಇಲ್ಲಿಯ ಮೂಲ ನಿವಾಸಿಗಳನ್ನು ಮತ್ತು ತಮ್ಮನ್ನು ವಿರೋಧಿಸಿದವರನ್ನು ಹೀನ ಸ್ಥಿತಿಗೆ ಇಳಿಸಿ, ತಮ್ಮ ಆರಾಧಕರನ್ನು ಅತ್ಯಂತ ಎತ್ತರಕ್ಕೆ ಏರಿಸುವ ಇವರ ಕಾರ್ಯಕ್ರಮ ಬಹಳ ಹೀನಾಯವಾಗಿತ್ತು. ಇವರ ಆರಾಧಕರ ಸಂಖ್ಯೆ ಬಹಳ ಕಡಿಮೆ ಇತ್ತು. ಆದ ಕಾರಣ ಅವರ ಸಂಖ್ಯೆಯನ್ನು ಹೆಚ್ಚಿಸುವುದಕ್ಕಾಗಿ ಒಕ್ಕಲಿಗ ಜನಾಂಗದವರನ್ನು "ಕೊಡವ" ಜನಾಂಗಕ್ಕೆ ಸೇರಿಸುವ ಕಾರ್ಯಕ್ರಮ ಕೈಗೆತ್ತಿಕೊಂಡರು. ಸೋಮವಾರಪೇಟೆ ತಾಲೂಕಿನ ಸೂರ್ಲಬಿ, ಗರವಾಲೆಗಳಲ್ಲಿ ಅನೇಕ ಒಕ್ಕಲಿಗ ಕುಟುಂಬಗಳು ಸಾರಾಸಗಟ್ ಜಾತ್ಯಾಂತರಗೊಂಡರು. ಹೊರ ಜಿಲ್ಲೆಯ ಸಂಬಂಧಿಕರಿದ್ದವರು ಮಾತ್ರ ಒಕ್ಕಲಿಗರಾಗಿಯೇ ಉಳಿದರು. ಇದಕ್ಕೆ ಇತ್ತೀಚಿನ ನೆನಪಿನಲ್ಲಿ ಈ ತಲೆಮಾರಿನವರೊಂದಿಗೆ ಅಪರಿಚಿತರನ್ನು ಕೊಡಗರಾಗಿ ಸ್ವೀಕರಿಸಿ ಸೇರಿಸಿಕೊಳ್ಳಲಾಗಿದೆ. ಕಿಗ್ಗಟ್‌ನಾಡಿನಲ್ಲಿ ಆರು ಕುಟುಂಬಗಳನ್ನು ಹತ್ತು ವರ್ಷಗಳ ಹಿಂದೆ ಮುಖ್ಯ ಶಿರಸ್ಥೆದಾರ ನಂಜಪ್ಪ ಕೊಡಗರಾಗಿ ತೆಗೆದುಕೊಂಡನು. ಆದರೆ ಆತನ ಮರಣದ ನಂತರ ಕೊಡಗು ಜನರು ಅವರನ್ನು ಜಾತಿಯಿಂದ ಹೊರ ಹಾಕಿದರು. ಈ ವ್ಯಾಜ್ಯ ಇನ್ನೂ ಕೂಡ ತೀರ್ಮಾನವಾಗಲು ಬಾಕಿ ಉಳಿದಿದೆ. ಆಧಾರವಾಗಿ ರಿಕ್ಟರನ ಗ್ಯಾಜಿಟಿಯರ್ ಆಫ್ ಕೂರ್ಗ್ ಪುಟ 231-232ನ್ನು ಪರಿಶೀಲಿಸಬಹುದು. ಹಿಂದೆ ಕೊಂಗಾಳ್ವರು ನಂಜರಾಜರಾಯ ಪಟ್ಟಣದಲ್ಲಿ ಆಳುತ್ತಿದ್ದಾಗ ನಾಗರೀಕತೆಯನ್ನು ಕಂಡಿದ್ದ ದಕ್ಷಿಣ ಕೊಡಗಿನಲ್ಲಿದ್ದ ಕಿಗ್ಗಟ್‌ನಾಡಿನ ಒಕ್ಕಲಿಗರನ್ನೂ ಕೂಡಾ ಜಾತ್ಯಾಂತರಗೊಳಿಸಿದರು ಎಂದು ತಿಳಿಯುತ್ತದೆ.

ಈ ಸಣ್ಣ ಪ್ರಮಾಣದಲ್ಲಿರುವ ಬ್ರಿಟೀಷ್ ಬೆಂಬಲಿಗರನ್ನು ಕೂಡಾ ಈಗಿನ ಪರಿಸ್ಥಿತಿಗೆ ಹೊಂದಿಸಿಕೊಂಡು, ಭಾರತೀಯರನ್ನಾಗಿಸುವುದರಲ್ಲಿ ಪ್ರಯತ್ನಿಸಿದವರ ಪೈಕಿ ಚೆಪ್ಪುಡಿರ ಪೂಣಚ್ಚನವರು ಗಮನಾರ್ಹರು ಅಂತವರನ್ನೇ ಹೀನಾಯವಾಗಿ ನಿಂದಿಸುವವರು ಯಾವಾಗ, ಹೇಗೆ, ಯಾರಿಂದ, ಮಾನಸಿಕ ಪರಿವರ್ತನೆಗೊಂಡಾರು ? ಎಂಬುದಾಗಿ ಚಿಂತಿಸುವಾಗ ನಮ್ಮ ಸ್ವಾಮೀಜಿಯವರು ನೆನಪಿಗೆ ಬಂದರು. ಶ್ರೀ ಮಠದಲ್ಲಿ ಹತ್ತಾರು ವರ್ಷಗಳಿಂದ ಸ್ವಾಮಿಯಾಗಿ ನೆಲೆಸಿರುವ ಶ್ರೀ ಶರಣಾನಂದರು ಪೂರ್ವಾಶ್ರಮದಲ್ಲಿ ಕೊಡವರಾಗಿದ್ದರು. ಹಾಗೇ ಇನ್ನು ಅನೇಕ ಕೊಡವ ಅನುಯಾಯಿ, ಅಭಿಮಾನಿಗಳನ್ನು ಸ್ವಾಮೀಜಿ ಹೊಂದಿದ್ದಾರೆ. ಅಲ್ಲದೆ ಪೂರ್ವಾಶ್ರಮದಲ್ಲಿ ಕೊಡಗಿನ ಗೌಡರಾಗಿದ್ದ ಪ್ರಸನ್ನನಾಥ ಸ್ವಾಮೀಜಿ ಶ್ರೀ ಮಠದ ಶಿವಮೊಗ್ಗ ಶಾಖೆಯ ಮುಖ್ಯಸ್ಥರಾಗಿದ್ದಾರೆ. ಆದ ಕಾರಣ ಕೊಡವ-ಗೌಡರೊಳಗೆ ಸಾಮರಸ್ಯ ನಿರ್ಮಿಸುವುದು ಈ ನಮ್ಮ ಸ್ವಾಮೀಜಿಗಳಿಗೆ ಸಾಧ್ಯ ಎನ್ನುವ ನಿಟ್ಟಿನಲ್ಲಿ ಕೊಡಗು ಪ್ರಜಾವೇದಿಕೆ ಶೀಘ್ರದಲ್ಲೇ ಶ್ರೀಗಳ ನೇತೃತ್ವದಲ್ಲಿ ಮಡಿಕೇರಿಯ ಗಾಂಧಿ ಮೈದಾನದಲ್ಲಿ ಬೃಹತ್ ಸಮಾವೇಶವೊಂದನ್ನು ಏರ್ಪಡಿಸಲಿದೆ. ಪ್ರಾದೇಶಿಕವಾದ ವೇಷ ಭೂಷಣಗಳಿಂದ, ನಡೆ, ನುಡಿಗಳಿಂದಾಗಿ ಕೊಡಗಿನವರನ್ನು ಸುಲಭವಾಗಿ ಗುರುತಿಸಬಹುದು. ಕುರುಂಬಯ್ಯ, ಮಂದಣ್ಣ, ಚೊಂದಮ್ಮ, ಮಾಚಮ್ಮ ಮೊದಲಾದ ಹೆಸರುಗಳೊಂದಿಗ "ಗೌಡ, ಶೆಟ್ಟಿ" ಇತ್ಯಾದಿ ಜಾತಿ ಸೂಚಕ ಪದಗಳಿಲ್ಲ. ಇತ್ತೀಚಿನವರೆಗೆ ಹೊರ ಪ್ರಪಂಚಕ್ಕೆ ಕೊಡಗಿನಲ್ಲಿ ಜಾತಿಯತೆ ಇರಲಿಲ್ಲ ಅಥವಾ ಕೊಡಗಿನಲ್ಲಿ ಇರುವವರೆಲ್ಲ ಬಹುತೇಕ ಹಿಂದುಗಳು ಒಂದೇ ಜಾತಿಗೆ ಸೇರಿದವರು ಎನ್ನುವ ಅಭಿಪ್ರಾಯ ಇತ್ತು. ಆದರೆ ಅದು ಈಗ ಬದಲಾಯಿಸಲಾಗಿದೆ. ಹೊರಗಿನವರಿಗೆ

ಇವರಲ್ಲಿ ಗೌಡ, ಹೆಗ್ಗಡೆ, ಐರಿ ಇತ್ಯಾದಿ ಅನೇಕ ಜಾತಿಯವರಿದ್ದಾರೆಂದು ಗೊತ್ತಾಗಿದೆ. ಇದು ಹಾಗಿರಲು ಕಾರಣ ಏನು? ಈಗ ಹೀಗಾಗಲು ಕಾರಣ ಏನು? ನಾವೆಲ್ಲರೂ ಯೋಚಿಸಬೇಕಾಗಿದೆ. ಮೊದಲಿಂದಲೂ ಕೊಡಗಿನಲ್ಲಿ ಅತ್ಯಧಿಕ ಜನಸಂಖ್ಯೆ ಒಕ್ಕಲಿಗ ಜನಾಂಗದವರದ್ದಾಗಿತ್ತು. ಆದರೆ 1837ರಲ್ಲಿ ಗೌಡ ಜನಾಂಗದವರು ಬ್ರಿಟೀಷರ ಎದುರು ದಂಗೆ ಎದ್ದರು. [ಪುಟ 360-365 ರಿಕ್ಟರ್‌ನ ಗೆಜೆಟಿಯರ್ ಆಫ್ ಕೂರ್ಗ್] ಇವರೊಂದಿಗೆ ಲಿಂಗಾಯಿತರೂ ಸೇರಿಕೊಂಡಿದ್ದರು. ಸೋಮವಾರಪೇಟೆ ತಾಲೋಕಿನಲ್ಲಿ ಲಿಂಗಾಯಿತರ ಸಂಖ್ಯೆಯೂ ಕೂಡ ಸಾಕಷ್ಟು ಇದೆ. ಕೊಡವರು 1837ರ ದಂಗೆಯನ್ನು ಮೊದಲು ಬೆಂಬಲಿಸಿದ್ದರು. ಆದರೆ ಕೊನೆಗಳಿಗೆಯಲ್ಲಿ ಬೋಪು ದಿವಾನನ ಆಮಿಷಕ್ಕೆ ಬೆರಗಾಗಿ ಬ್ರಿಟೀಷರ ಪಕ್ಷಕ್ಕೆ ಬದಲಾದರು. ಇದು ಚರಿತ್ರೆಯಲ್ಲಿ ದಾಖಲಿಸಲ್ಪಟ್ಟಿದೆ. ಈ ಘಟನೆಯ ನಂತರ ಒಡೆದು ಆಳುವುದರಲ್ಲಿ ನಿಪುಣರಾಗಿದ್ದ ಬ್ರಿಟೀಷರು ಒಕ್ಕಲಿಗ ಜನಾಂಗವನ್ನು 3 ಭಾಗವಾಗಿ ಒಡೆದರು. ಸೋಮವಾರಪೇಟೆಯವರನ್ನು ಒಕ್ಕಲಿಗರೆಂದೂ, ಮಡಿಕೇರಿಯವರನ್ನೂ ಕೊಡಗಿನ ಗೌಡರೆಂದೂ, ದಕ್ಷಿಣ ಕನ್ನಡದವರನ್ನು ಪ್ರತ್ಯೇಕ ಗುಂಪಿನವರೆಂದು ವಿಭಜಿಸಿದ್ದರು. ಬ್ರಿಟೀಷರು ದೇಶ ಬಿಟ್ಟು ಹೋಗುವ ತನಕ ಈ ರೀತಿಯ ಪ್ರತ್ಯೇಕತೆಯನ್ನು ನಾನಾ ರೀತಿಯಲ್ಲಿ ಪೋಷಿಸಿದರು.

ಹೀಗೆ ಈ ಮೂರು ಗುಂಪುಗಳಲ್ಲಿ ವಿವಾಹ ಸಂಬಂಧಗಳೇ ನಿಂತು ಹೋಗುವ ಮಟ್ಟಕ್ಕೆ ತಲುಪಿತು. ಬ್ರಿಟೀಷರು ಹೋದ ಮೇಲೆ ಮತ್ತೆ ಸಂಬಂಧಗಳು ಬೆಳೆಯತೊಡಗಿದವು. 1946ರಲ್ಲಿ ನನ್ನ ಅಕ್ಕನ ಮಗಳ ವಿವಾಹ ಹಾಸನದ ಶ್ರೀ ಎಲ್. ಟಿ. ಕಾರ್ಲೆಯವರೊಂದಿಗೆ ಆಗುವ ಮೂಲಕ ಹೊಸ ಯುಗ ಪ್ರಾರಂಭವಾಯಿತು. ಶ್ರೀ ಕುರುಂಜಿ ವೆಂಕಟರಮಣಗೌಡರು ಕೊಡಗಿನಿಂದ ವಧುವನ್ನು ಪಡೆದ ದಕ್ಷಿಣ ಕನ್ನಡದ ಗೌಡರಲ್ಲಿ ಮೊದಲಿಗ. 1985ರಲ್ಲಿ ನಾನು ಸ್ವಾಗತ ಸಮಿತಿ ಅಧ್ಯಕ್ಷನಾಗಿ ಅನೇಕ ಹಿರಿಯರ ಬೆಂಬಲ ಹಾಗೂ ಆಶೀರ್ವಾದದೊಂದಿಗೆ 18000 ಜನ ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಯವರನ್ನು ಒಂದಾಗಿಸಿ, ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರ ಸಮ್ಮುಖದಲ್ಲಿ ಗೌಡ ಸಮ್ಮೇಳನ ನಡೆಸಿ, ನಾವು ಎಲ್ಲರು ನಿಮ್ಮ ಮೂಲಕ ಒಕ್ಕಲಿಗರೊಂದಿಗೆ ಒಂದಾಗಿದ್ದೇವೆ ಎಂದು ಘೋಷಿಸಿಕೊಂಡೆವು. ಈ ಮೂಲಕ ಕೊಡಗು ಜಿಲ್ಲೆಯಲ್ಲೂ ಕೂಡಾ ನಾವು ಒಕ್ಕಲಿಗರು ಒಂದಾದೆವು. ನಮ್ಮೊಳಗೆ ವಿವಾಹ ಸಂಬಂಧಗಳು ತಿರುಗಿ ಬೆಳೆಯತೊಡಗಿತು. ●

---

[18 ನೇ ಪುಟದಿಂದ]

ಮಂತ. ಅಂವ ಈ ಕೇಸ್‌ಗೆ ಲಕ್ಷ ರೂಪಾಯಿ ಖರ್ಚ್ ಮಾಡಿಕೂ ಹಿಂದೆ ಬೀಳುವ ಅಲ್ಲ.

'ಎಂತ ಹೇಳ್ತಾ ಒಳ ಅಣ್ಣಯ್ಯ ನೀನ್?

ಅವುಳು ಅಣ್ಣನ ಭುಜ ಹಿಡ್‌ಕಂಡ್ ಜೋರಾಗಿ ಮರ್ಡ್ಕೆ ಸುರ್‌ಮಾಡ್ತ್.

'ಪೊಲೀಸ್ ಕೇಳ್ರೆ ನಡ್ದ ಸಂಗತಿನ ಎಲ್ಲಾ ಬುಡದೇ ಹೇಳ್. ನಾನ್ ಹೋನೆ ಅದೃಷ್ಟ ಇದ್ದರೆ ವಾಪಾಸ್ ಬನ್ನೆ. ಪಪ್ಪಂಗೂ ಹೇಳಿ ಬುಡ್.'

ಅಷ್ಟ್ ಹೇಳಿ ಚಂಗುಮಣಿ ಹೋತ್.

ಹೋಗ್ತಾ ಇದ್ದ ಚಂಗುಮಣಿಗೆ ದಾರಿಲಿ ಬೋರ್‌ಗುಡ್ಡೆ ದೇವಯ್ಯನ ಕಾರ್ ಬರ್ತಾ ಇರ್‍ದು ಕಂಡತ್.

ಚಂಗುಮಣಿನ ಕಂಡ್ ದೇವಯ್ಯ ಕಾರ್ ನಿಲ್ಸಿತ್.

'ನೀನ್ ಯಾಗ ಮಾರಾಯ ಬಂದ್ ಬುಟ್ಟಿದ್. ಬಂದಂಗೆ ನನ್ನ ಕಾಂಬೊಕೂಂತ ಹೇಳಿದ್ದೆ ..'

'ನಾವಿಬ್ಬರ್ ಪರಸ್ಪರ ಕಾಣದೇ ಹೋದರೆ ಏನ್ ಸಾರ್. ನೀವ್ ಹೇಳ್ದ ಕೆಲ್ಸ ನಾನ್ ಮಾಡಿ ಮುಗ್ಸಿಯೊಳೆ ಅಡಿಗೆ ಮನೆಲೇ ಉರುಳಿಸಿ ಹಾಕಿಯೊಳೆ, ಯಾರಾದ್ರು ಹೋಗಿ ನೋಡುವಲ್ಲಿವರೆಗೂ ಹೆಣ ಅಲ್ಲೇ ಇದ್ದದೆ.

ಚಂಗುಮಣಿ ಹೇಳ್ತ್.

ದೇವಯ್ಯಂಗೆ ಕುಸಿಯೋ ಕುಸಿ

ಶಾಬಾಸ್ ಚಂಗುಮಣಿ, ಕೊಡು ಕೈ.

ದೇವಯ್ಯ ಚಂಗುಮಣಿಗೆ ಶೇಕ್ ಹ್ಯಾಂಡ್ ಮಾಡ್ತ್. [ಸಶೇಷ]

---

## ಬೇಡಿ [ಕೋಳ]

ಅವರ್‌ದ್ ಅಪೂರ್ವ ಜೋಡಿ
ಅತ್ತ ಇತ್ತ ಅಂಗರಕ್ಷಕರಿದ್ದ ಆ ಜೋಡಿ
ನೋಡ್‌ತ್ತಿದ್ದ ಜನಕ್ಕೆಲ್ಲ ಮಾಡ್
ತ್ತಿತ್ತ್ ಮೋಡಿ
ಯಾರ್‌ದಿರ್‌ದು ಈ ಅಪೂರ್ವ ಜೋಡಿ
ಅಂತ ನೋಡಿಕೆ
ನಾನ್ ನಡ್‌ದೆ ಅವರ ಹಿಂದೆ ಓಡಿ ಓಡಿ
ಕಡೆಗೆ ನಾನ್ ಕಂಡೆ ಜೋಡಿಗಳ
ಕೈಗಳ್ಲಿ
ಮಿಂಚ್‌ತ್ತಿದ್ದ ಬೇಡಿ.

—ಕರ್ಣಯ್ಯನ **ಸಂಧ್ಯ ಕಾಳಪ್ಪ,**
ಕುಂಬಳದಾಳು.

## ವಿರಾಜಪೇಟೆ ತಾಲೋಕು ಗೌಡ ಸಂಘಟನೆಯ ಬೀಜಾಂಕುರ

ಇದೇ 20-12-1998 ರಂದು ವಿರಾಜಪೇಟೆ ತಾಲೋಕು ಕೊಡಗು ಗೌಡ ಜನಾಂಗದ ಸಂಘಟನೆಗೋಸ್ಕರ ಕೆಲವು ಅಭಿಮಾನಿಗಳ ಪ್ರಯತ್ನದಿಂದ ಕರ್ನಾಟಕ ಸಂಘ ವಿರಾಜಪೇಟೆಯಲ್ಲಿ ಸಭೆಯನ್ನು ಕರೆಯಲಾಗಿತ್ತು. ಅಂದು ಹಿರಿಯರಾದ ಶ್ರೀ ಪೊಕ್ಕಳಂಡ್ರ ಸುಬ್ಬಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಮುಖ್ಯ ಅತಿಥಿಯಾಗಿ ಕೊಡಗು ಸಂಗಾತಿ ಪತ್ರಿಕೆಯ ಗೌರವ ಸಂಪಾದಕರಾದ ಶ್ರೀ ಪಟ್ಟಡ ಪ್ರಭಾಕರ್‌ರವರು ಆಗಮಿಸಿದ್ದರು. ವೇದಿಕೆಯಲ್ಲಿ ಕೊಡಗು ಗೌಡ ಸಾಂಸ್ಕೃತಿಕ ಅಕಾಡೆಮಿಯ ಉಪಾಧ್ಯಕ್ಷರಾದ ಶ್ರೀ ಗುಡ್ಡೆಮನೆ ರಮೇಶ್, ಶ್ರೀಯುತರಾದ ಪಡಿಕಲ್ ಮಾದಪ್ಪನವರು, ದೇವಜನ ಡಾ|| ರಾಮಯ್ಯನವರು ಕೊರಿಯಾರ್ ಆನಂದರವರು ಹಾಗೂ ಅವರ ಮಾತೋಶ್ರೀ ಮತ್ತು ಅರೆಭಾಷಿಕ ಸಾಂಸ್ಕೃತಿಕ ಸಮಿತಿ ಮೈಸೂರು ಇದರ ಅಧ್ಯಕ್ಷರಾದ ತಡಿಯಪ್ಪನ ಕುಮಾರಜಯರವರು ವೇದಿಕೆಯಲ್ಲಿ ಉಪಸ್ಥಿತರಿದ್ದು, ಸಂಘಟನೆಯ ಹಾಗೂ ಗೌಡ ಸಮಾಜ ಸ್ಥಾಪಿಸುವ ಬಗ್ಗೆ ಹಲವಾರು ಸಲಹೆ ಸೂಚನೆಗಳನ್ನು ಕೊಟ್ಟರಲ್ಲದೆ, ಈ ಸಂಘಟನೆಯ ಸಭೆಯನ್ನು ಕರೆದಿರುವುದಕ್ಕೆ ತುಂಬಾ ಸಂತೋಷ ವ್ಯಕ್ತಪಡಿಸುತ್ತಾ. ಹುಮ್ಮನಿಸ್ಸಿನಿಂದ ಗೌಡ ಸಮಾಜ ಸ್ಥಾಪಿಸುವ ಬಗ್ಗೆ, ಜನಾಂಗದ ಸಂಘಟನೆಯ ಬಗ್ಗೆ ಸೇರಿದ ಸಮಸ್ತರು ಚರ್ಚಿಸಲಾಯಿತು. ಕೊಡಗು ಗೌಡ ಸಂಘಟನೆಯನ್ನು ಹೆಚ್ಚು ಚಟುವಟಿಕೆಯಿಂದ ತಾಲೋಕಿನಾದ್ಯಂತ ಹೆಚ್ಚಿನ ಕಾರ್ಯ ಪ್ರವೃತ್ತರಾಗಲು ಒಂದು ಸಮಿತಿಯನ್ನು ರಚಿಸಲಾಯಿತು. ಅದರಂತೆ ಈ ಸಭೆಯಲ್ಲಿ ಹಾಜರಿದ್ದವರಲ್ಲಿ ವಿರಾಜಪೇಟೆ ತಾಲೋಕು ಗೌಡ ಜನಾಂಗದ ಸಮಿತಿಗೆ ಈ ಕೆಳಕಂಡವರನ್ನು ಸರ್ವಾನುಮತದಿಂದ ಆಯ್ಕೆ ಮಾಡಲಾಯಿತು. ಅಧ್ಯಕ್ಷರಾಗಿ ಶ್ರೀ ಪಡಿಕಲ್ ಮಾದಪ್ಪನವರು, ಉಪಾಧ್ಯಕ್ಷರಾಗಿ ಕೊರಿಯಾರ್ ಆನಂದ, ಕಾರ್ಯದರ್ಶಿಯಾಗಿ ಮೂಡಗದ್ದೆ ರಾಮಕೃಷ್ಣ [ವಸಂತ್], ಸಂಘಟನಾ ಕಾರ್ಯದರ್ಶಿಗಳಾಗಿ ಬಾರಿಕೆ ಮನು ಮತ್ತು ಪೊಕ್ಕಳಂಡ್ರ ಪಾರ್ವತಿ ಗಣಪತಿ ಖಜಾಂಚಿಯಾಗಿ ಪೊಕ್ಕಳಂಡ್ರ ಸುಬ್ಬಯ್ಯನವರನ್ನು ಆಯ್ಕೆ ಮಾಡಲಾಯಿತು. ಅಲ್ಲದೆ ಸಮಿತಿ ಸದಸ್ಯರುಗಳನ್ನಾಗಿ ಗೌಡುದಾರೆ ಬಿದ್ದಪ್ಪ, ಕೋಳಿಮಾಡು ತಿಮ್ಮಯ್ಯ, ಅಣ್ಣಮಂಡ್ರನಂದ ಮೊಣ್ಣಪ್ಪ, ಪೆರಬಾಯಿ ಪುಟ್ಟಸ್ವಾಮಿ, ಮುಕ್ಕಾಟಿ ಈರಪ್ಪ, ಬೈಮನ ನಾಣಯ್ಯ, ಚೆಟ್ಟಿನೆರವನ ಭೋಜಮ್ಮ, ಚಂಡೀರ ದೇವರಾಜ್, ಪಡಿಕಲ್ ನಿಧಿ, ದೇವಜನ ಕೇಶವ, ಗೌಡುದಾರೆ ರೀನಾ ರಾಮಯ್ಯ, ಕೊರಿಯಾರ್ ಪುಟ್ಟುಸ್ವಾಮಿ, ಇವರುಗಳನ್ನು ಸರ್ವಾನುಮತಿಯಿಂದ ಆಯ್ಕೆ ಮಾಡಲಾಯಿತು. ಈ ಆಯ್ಕೆ ಆದ ಸಮಿತಿ ಸದಸ್ಯರು ಗೌಡ ಜನಾಂಗದ ಸಂಘಟನೆಯ ಬಗ್ಗೆ ಶಕ್ತಿ ಮೀರಿ ಶ್ರಮಿಸುವುದಾಗಿ ಸಭೆಗೆ ಒಬ್ಬೊಬ್ಬರಾಗಿ ಪ್ರತಿಜ್ಞೆಗೈದು ಭರವಸೆ ಇತ್ತರು. ಒಗ್ಗಟ್ಟಿನಿಂದ ಶ್ರಮಿಸಲು ಹಾಗೂ ಸಭೆಯು ಸುಸೂತ್ರವಾಗಿ ಮುಂದೆ ಸಾಗಲು ಹಲವಾರು ರೀತಿಯ ಸಲಹೆ ಸೂಚನೆಗಳನ್ನು ಶ್ರೀ ಗುಡ್ಡೆಮನೆ ರಮೇಶ್ ನೀಡಿದರಲ್ಲದೆ ಸಭೆಯನ್ನು ಅತ್ಯುತ್ತಮವಾಗಿ ನಿರೂಪಿಸಿ ಪ್ರಶಂಸೆಗೆ ಪಾತ್ರರಾದರು. ಗೌಡುದಾರೆ ರೀನಾ ರಾಮಯ್ಯ ಪ್ರಾರ್ಥಿಸಿದರೆ ಬಾರಿಕೆ ಮನು ವಂದನಾರ್ಪಣೆ ಮಾಡಿದರು. ಈ ಸಭೆಯಲ್ಲಿ ಕೊಡಗು ಸಾಂಸ್ಕೃತಿಕ ಅಕಾಡೆಮಿಯ ಕಾರ್ಯದರ್ಶಿ ಕೋಡಿ ಚಂದ್ರಶೇಖರ್, ಸಮಾಜ ಚಿಂತಕ ಹಿತೈಷಿ ಆದ ಬೈತಡ್ಕ ಬೆಳ್ಯಪ್ಪ ಹಾಗೂ ಕೊಡಗು ಸಂಗಾತಿಯ ಬಳಗದ ಮಜ್ಞಾಂಡ್ರ ರಮೇಶ್, ಬೈನೆರವನ ಇಂದ್ರಕುಮಾರ್, ಸಟ್ಟೇಜನ ನರೇಂದ್ರ ಇವರುಗಳು ಹಾಜರಿದ್ದರು. ●

ವರದಿ : ಮೂಡಗದ್ದೆ **ರಾಮಕೃಷ್ಣ [ವಸಂತ್]** ಕೊಡಗು

# ಲೇಖಕರೇ ಗಮನಿಸಿ

ಉತ್ಸಾಹಿ ಲೇಖಕರೇ, ತಾವು ಬರೆದು ಕಳಿಸುವ ಕಥೆ, ಕವನ, ಲೇಖನ, ಹಾಸ್ಯ ಲೇಖನ ಇತ್ಯಾದಿಗಳನ್ನು ಬರೆದು ಕಳುಹಿಸುವವರು ಹಾಳೆಯ ಒಂದೇ ಬದಿಯಲ್ಲಿ, ದಪ್ಪ ಅಕ್ಷರಗಳಲ್ಲಿ, ಸ್ಪಷ್ಟವಾಗಿ ಬರೆದು ಅದಕ್ಕೆ ಸರಿಯಾದ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಬೇಕು. ಹಾಗೆ ಸರಿಯಾಗಿ ಅಂಚೆ ಚೀಟಿಯನ್ನು ಲಗತ್ತಿಸದಿದ್ದ ಪತ್ರಗಳನ್ನು ಸ್ವೀಕರಿಸಲಾಗುವುದಿಲ್ಲ.

—ಸಂ

## ಕೊಡಗಿನಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ನಾಂದಿ ಹಾಡಿದ 75 ವರ್ಷದ ಜನಪ್ರಿಯತೆಯ ಹಿರಿಮೆವುಳ್ಳ ಕನ್ನಡ ದಿನಪತ್ರಿಕೆ "ಕೊಡಗು ದೈನಿಕ" ಇದೀಗ ಆಫ್‌ಸೆಟ್ ಮುದ್ರಣದಲ್ಲಿ ಅತ್ಯಾಕರ್ಷಕವಾಗಿ ಮೂಡಿಬರುತ್ತಲಿದೆ

ಕೊಡಗ್ ಗಂಡ್‌ನೆಲ! ನಮ್ಮ ಭಾಷೆ, ಸಂಸ್ಕೃತಿ, ಕಲೆ, ಸಾಹಿತ್ಯ, ಪರಿಸರ ಹಿಂಗೆ ಎಲ್ಲನ ಯಾರೋ ಹೇಳಿಕೆ ಬದ್ಲ್ ನಾವ್ ನಾವೇ ಹೇಳಿಕೆ ಸುರುಮಾಡ್ರೆ ಹೆಂಗೆ? ಗೇಂಟಿ ಕಟ್ಟಿ, ಕುಪ್ಪಸ ದಟ್ಟಿ ತೊಟ್ಟ್...... ಎಲ್ಲವೂ ಕೂಡಿ ಸೋಬಾನೆ ಹಾಡಿ, ಕೋಲ್ ಹೊಡ್ದ್, ಕುಣಿಯಕೆ ಸುರುಮಾಡ್ರೆ?......ಇದೆಲ್ಲದರ ಸವಿಯಕೆ ಎಲ್ಲಾ ದೊನಿಂಜಾಗಿ, ಪೊರ್ಲಾಗಿ ಬೆಂಬಿ ಬೆಳ್ಗ್‌ನೆ ನಿಮ್ಮಲ್ಲಿಗೆ ಬರ್ತಾ ಉಟ್ಟು **ಕೊಡಗು ದೈನಿಕ**. ನಮ್ಮ ನಿಮ್ಮೆಲ್ಲರ ನಡುಲಿ ನೀತಿಲಿ ಪ್ರೀತಿಲಿ ಬೆಸಿಯಕೆ ಎಲ್ಲವುಕು ಸೇರ್ದಾ ನಮ್ಮ ಸಂಸ್ಕೃತಿನ ಉಳ್ಸಿ, ಜಾತಿ_ಜಾತಿನ ನಡುಲಿ ಹೊಸಸೇರಿ ಉಟ್ಟ್, ಹೊತಾರೆ ನಿಮ್ಮ ಬಾಗ್ಲಿಗೆ ಬರ್ತುಟ್ಟು. ಇದರೊಟ್ಟಿಗೆ ನಮ್ಮ ಆಟ, ಪಾಟ, ಕೂಟಗ, ಕಥೆಗ, ಕವನಗ, ಚುಟುಕಗ, ಅರೆಭಾಷೆಲಿ ಹಾಸ್ಯಗ, ಲೇಖನಗ ಹಿಂಗೆ ಹತ್ತ್ ಹಲವ್ ವಿಷಯಗ ಮೂಡಿ ಬಂದದೆ.

ಅರೆಭಾಷೆಯ ಲೇಖನಗ ಕೊಡಗ್‌ನ ದಿನಪತ್ರಿಕೆಯೊಂದರ್ಲಿ ಬಾದು ಇದೇ ಸುರು. ನೀವೆಲ್ಲಾ ಇಂದೇ ಚಂದದಾರರಾಗಿ ಪತ್ರಿಕೆನ ಕೊಂಡ್ ಓದಕೂತ ನಮ್ಮ ನಮ್ರ ವಿನಂತಿ.

**ಕೊಡಗು ದೈನಿಕ ಬಳಗ**
**ಜೂನಿಯರ್ ಕಾಲೇಜ್ ರಸ್ತೆ,**
**ಮಡಿಕೇರಿ-571 201**

# ಶುಭ ಹಾರೈಕೆಗ



ಕೂಡಕಂಡಿರ ದಿ|| ಉತ್ತಯ್ಯ ಇವ್ರ ಮಜ
**ಅಶೋಕ** ಮತ್ತೆ ಪೊಡ್ಡೊಳನ ಸೋಮಯ್ಯ
ಇವ್ರ ಮಗ್ಳು **ವೀಣಾಕುಮಾರಿನ** ಬಾಳಿನ
ಹೊಸ ದಾಂಪತ್ಯ ಜೀವನಕ್ಕೆ
ಶುಭ ಹಾರೈಸುವೆ.

**ಕಾವೇರಿನಾಡು, ವಿದ್ಯಾಸಂಸ್ಥೆ, ಬೆಂಗಳೂರು ಪದಾಧಿಕಾರಿಗ, ಅವ್ರ ಬಂಧು ಬಳಗದವ್ರು, ಮಿತ್ರರ್ ಹಂಗೆನೇ ಕೊಡಗು ಸಂಗಾತಿ ಸಹ**

Printed by M.K. Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore - 12. Published at Mysore, Editor PATTADA P. SHEELAMANI, No: 35, 1st Cross, 4th Block ( Near Divisional Telephone Office), Jayalakshmipuram, Mysore - 570 012 ✆ 516771